# ಭಾರತೀಯ ಕಾನೂನು ಇತಿಹಾಸ

# INDIAN LEGAL HISTORY




ಲೇಖಕರು :

ಪ್ರೊ. ಎಂ. ಎಂ. ಬಡ್ಡಿ
M.Sc; LL.B. (Spl.)



ಆಕಳವಾಡಿ ಬುಕ್ ಡಿಪೋ
ವಿಜಯ ರೋಡ, ಧಾರವಾಡ-೧

## ಮೊದಲ ನುಡಿ

ಭಾರತೀಯ ಕಾನೂನು ಇತಿಹಾಸ, ಇದು ಕಾನೂನು ವಿದ್ಯಾರ್ಥಿಗಳ ಬಹು ದಿನದ ಬೇಡಿಕೆ. ಪಠ್ಯಕ್ರಮಕ್ಕನುಗುಣವಾಗಿ ಚಿಕ್ಕದಾದ ಮತ್ತು ಎಲ್ಲ ವಿಷಯ ವಿವೇಚನೆಯುಳ್ಳ ಪುಸ್ತಕವು ಅತ್ಯಂತ ಅವಶ್ಯಕವಾಗಿತ್ತು. ಸರಿಯಾದ ಮತ್ತು ಅದೂ ಕನ್ನಡದಲ್ಲಿ ಅದರ ಲಭ್ಯವಿಲ್ಲದಿರುವುದು ಗಮನಕ್ಕೆ ಬಂದು ಅವರಿಗೆ ಉತ್ತಮವಾದ ವಿಷಯ ವಿವೇಚನೆಯನ್ನು ಒದಗಿಸುವುದೇ ನನ್ನ ಈ ಪುಸ್ತಕ ರಚನೆಯ ಪ್ರಮುಖ ಉದ್ದೇಶ. ಈ ದಿಸೆಯಲ್ಲಿ ನನ್ನ ಪ್ರಯತ್ನ ಫಲಕಾರಿಯಾದುದು ಹೆಮ್ಮೆಯ ವಿಷಯ.

ಇದು ಭಾರತದ ಸಂವಿಧಾನ ಅಭ್ಯಸಿಸುವ ವಿದ್ಯಾರ್ಥಿಗಳಿಗೂ, ಮತ್ತು ನ್ಯಾಯಶಾಸ್ತ್ರವನ್ನು ಅಭ್ಯಸಿಸುವ ವಿದ್ಯಾರ್ಥಿಗಳಿಗೂ, ಆಯಾ ವಿಷಯದ ಪಠ್ಯಕ್ರಮಕ್ಕನುಗುಣವಾಗಿ ಅವಶ್ಯವಾದ ಮಾಹಿತಿಯನ್ನು ಒದಗಿಸಲಾಗಿದೆ. ಅದರಿಂದಾಗಿ ಅವರಿಬ್ಬರಿಗೂ ಅತ್ಯಂತ ಉಪಯುಕ್ತ ಗ್ರಂಥವೆಂದೆನ್ನಿಸುತ್ತದೆ. ವಿಷಯ ವಿವೇಚನೆ ತಿಳಿಯಾಗಿದೆ. ಭಾಷೆ ಅರ್ಥವತ್ತಾಗಿದೆ. ರೂಢಿಗತ ಶಬ್ದಗಳ ಉಪಯೋಗ ಇದರ ವೈಶಿಷ್ಟ್ಯ. ಅಂತೆಯೇ ನನ್ನ ಇನ್ನುಳಿದ ಪುಸ್ತಕಗಳಂತೆ ವಿದ್ಯಾರ್ಥಿಗಳ ಮಾರ್ಗ ದರ್ಶನಕ್ಕೆ ಸಹಾಯಕಾರಿಯಾಗುವುದರಲ್ಲಿ ಸಂಶಯವಿಲ್ಲ.

ಈ ಪುಸ್ತಕದ ಪ್ರಮುಖ ಪ್ರೇರಣೆ ಶ್ರೀ ಮಾನ್ ಸತ್ಯನಾರಾಯಣ ಆಕಳವಾಡಿ ಯವರು. ಸೂಕ್ತವಾದ ಸಲಹೆ ಸೂಚನೆ ನೀಡಿ ಸಹಕರಿಸಿದ ಶ್ರೀ ಅರುಣ ಆಕಳವಾಡಿ ಯವರಿಗೆ ನಾನು ಉಪಕೃತನಾಗಿದ್ದೇನೆ. ಅತಿ ಕಡಿಮೆ ಸಮಯದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಮಂಜುನಾಥ ಆಕಳವಾಡಿ, ಉಮಾ ಪ್ರಿಂಟರ್ಸ, ಧಾರವಾಡ ಮತ್ತು ರೇಣುಕಾ ಪ್ರಿಂಟರ್ಸ, ಧಾರವಾಡ ಇವರಿಗೆ ಧನ್ಯವಾದಗಳು.

ಗ್ರಂಥದ ಕುರಿತಾದ ಎಲ್ಲ ಸಲಹೆ ಸೂಚನೆಗಳಿಗೆ ಓದುಗರಿಂದ ಸ್ವಾಗತ ಕೋರುತ್ತೇನೆ.

ಎಂ. ಎಂ. ಬದ್ದಿ

# ಪರಿವಿಡಿ



—o—

# ಭಾರತೀಯ ಕಾನೂನು ಇತಿಹಾಸ

## INDIAN LEGAL HISTORY

**ಪೀಠಿಕೆ (Introduction) :**

ಬ್ರಿಟೀಶರು ಭಾರತಕ್ಕೆ ಬರುವ ಮುನ್ನ ಸುಮಾರು ಏಳು ಶತಮಾನ ಕಾಲ ಮುಸ್ಲಿಮ್ ಅರಸರು ನಮ್ಮ ದೇಶವನ್ನು ಆಳಿದರು. ಅವರ ಕಾಲದಲ್ಲಿ ಯಾವುದೇ ರೀತಿಯ ಸಂವಿಧಾನವಿರಲಿಲ್ಲ. ಆಳರಸರ ಮನೋಭಿಲಾಷೆ, ಆಕಾಂಕ್ಷೆಗಳು ಕಾನೂನುಗಳಾಗಿದ್ದವು. ಕಾಲಕ್ರಮೇಣ ಮೊಗಲರ ಆಳಿಕೆ ಕ್ಷೀಣಿಸುತ್ತ ಸಾಗಿತು. ಅದರಿಂದಾಗಿ, ಸಣ್ಣ ಸಣ್ಣ ಅರಸರು, ಜಾಗೀರುದಾರರು ಸ್ವತಂತ್ರರಾಗಲು ಹವಣಿಸಿ ಕೆಲಮಟ್ಟಿಗೆ ಯಶಸ್ಸನ್ನು ಪಡೆದುಕೊಂಡರು.

ಇದೇ ಕಾಲಕ್ಕೆ ಇಂಗ್ಲಂಡದ ಕೆಲ ವರ್ತಕರು ಭಾರತದಲ್ಲಿ ವ್ಯಾಪಾರ ಮಾಡುವ ಸಲುವಾಗಿ ರಾಜ ಸನ್ನದನ್ನು ಪಡೆದುಕೊಂಡು 1600 ರಲ್ಲಿ ಭಾರತಕ್ಕೆ ಬಂದರು. ಕೇವಲ ವ್ಯಾಪಾರವೊಂದೇ ಅವರ ಧ್ಯೆಯೋದ್ದೇಶವಾಗಿತ್ತು. ಅವರಿಗೆ ಸಮಗ್ರ ವ್ಯವಹಾರ ಹಕ್ಕನ್ನು ನೀಡಲಾಗಿತ್ತು. ಕಂಪನಿಯ ವ್ಯವಹಾರವು ನಿರ್ದೇಶಕ ಸಮಿತಿಯ ಮೂಲಕ ನಿಯಂತ್ರಿಸಲ್ಪಡಬಹುದಾಗಿತ್ತು. ಅದು 24 ಜನ ನಿರ್ದೇಶಕರನ್ನೂ ಮತ್ತು ಒಬ್ಬ ಗವ್ಹರ್ನರ ಜನರಲ್‌ನನ್ನೂ ಒಳಗೊಂಡಿತ್ತು. ತನ್ನ ವಾಣಿಜ್ಯ ವ್ಯವಹರಣೆಗೆ ಸಂಬಂಧಪಟ್ಟ ನಿಯಮಾವಳಿಗಳನ್ನು ನಿರೂಪಿಸಿಕೊಳ್ಳಬಹುದಾದ ಅಧಿಕಾರವನ್ನು ಕಂಪನಿಯು ಪಡೆದುಕೊಂಡಿತ್ತು. ಇದೇ ಭಾರತದ ಇತಿಹಾಸದ ತಿರುವಿನ ಅತ್ಯಂತ ಮಹತ್ವದ ಘಟನೆ.

ಇಂಗ್ಲೀಷ ವರ್ತಕರು ಭಾರತದಲ್ಲಿ ವಾಣಿಜ್ಯ ವ್ಯವಹರಣೆಯನ್ನು ಮಾಡುತ್ತ ಹೇರಳವಾದ ಸಂಪತ್ತನ್ನು ತಮ್ಮ ತಾಯ್ನಾಡಿಗೆ ಕೊಂಡೊಯ್ಯತೊಡಗಿದರು. ಅಂತೆಯೇ, ಅವರಲ್ಲಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ವ್ಯಾಪಾರವನ್ನು ಮಾಡುತ್ತ ಹೆಚ್ಚಿನ ಸಂಪತ್ತನ್ನು ಗಳಿಸಬೇಕೆಂಬ ಬಯಕೆ ಬಲವಾಯಿತು. ಅಂತೆಯೇ, ತಮ್ಮ ವ್ಯವಹಾರ ವರ್ಧನೆಗಾಗಿ ಅವಶ್ಯಕವಾದ ಕ್ರಮಗಳನ್ನು ಅನುಸರಿಸತೊಡಗಿದರು. ಸಮಯ ಗತಿಸಿದಂತೆ, ತಾತ್ಕಾಲಿಕ ಭಾರತದ ಆಳರಸರ ನ್ಯೂನತೆಗಳನ್ನು ಗಮನಿಸಿ ಅವರ ಪ್ರೀತಿ, ವಿಶ್ವಾಸವನ್ನು ಗಳಿಸುತ್ತ ಸಮಯ ಸಾಧಿಸಿ ಬ್ರಿಟಿಶ್ ಔದ್ಯಮಿಕ ಕಂಪನಿಗಳನ್ನು ಭಾರತದಲ್ಲಿ ಪ್ರಾರಂಭಿಸುವ ಅನುಮತಿಯನ್ನು ಪಡೆದುಕೊಂಡರು. ತತ್ಪರಿಣಾಮವಾಗಿ ದೇಶದ ಹಲವಾರು ಭಾಗಗಳಲ್ಲಿ ಬ್ರಿಟಿಶ್ ಔದ್ಯಮಿಕ ಕಂಪನಿಗಳು ತಲೆ ಎತ್ತಲಾರಂಭಿಸಿದವು. ಇಲ್ಲಿಯ ಕಚ್ಚಾ ಮಾಲನ್ನು ಖರೀದಿಸಿ ಅವುಗಳನ್ನು ಪಕ್ಕಾ ವಸ್ತುಗಳನ್ನಾಗಿ ಪರಿವರ್ತಿಸಿ ಅದರಿಂದ ದೊರೆತ ಲಾಭವನ್ನು ತಾಯ್ನಾಡಿಗೆ ಸಾಗಿಸತೊಡಗಿದರು. ಆದರಿಂದಾಗಿ ಈಸ್ಟ ಇಂಡಿಯಾ ಕಂಪನಿಯು ತನ್ನ ಸರ್ವತೋಮುಖ ಅಭಿವೃದ್ಧಿಯನ್ನು ಹೊಂದಲಾರಂಭಿಸಿತು. ಕಂಪನಿಗೆ ತನ್ನ

ಒಳಾಡಳಿತಕ್ಕೆ ಸಂಬಂಧಪಟ್ಟ ನಿಯಮಗಳನ್ನು ನಿರೂಪಿಸುವುದರ ಜೊತೆಗೆ, ಭಾರತದಲ್ಲಿ ವಾಣಿಜ್ಯ ವ್ಯವಹರಣೆ ಮಾಡಬಹುದಾದ ಸಮಗ್ರ ಅಧಿಕಾರವನ್ನು ಪಡೆದುಕೊಂಡಿರುವುದರಿಂದಾಗಿ, ಕಾಲಗತಿಸಿದಂತೆ ಅದು ಬಲಿಷ್ಟವಾಗುತ್ತ ಸಾಗಿತು.

ಇದರ ಜೊತೆಗೆ, ಕಂಪನಿಯು ಹಲವಾರು ಪೂರಕ ಅಧಿಕಾರಗಳನ್ನು ಪಡೆದುಕೊಂಡು ತನ್ನದೇ ಆದ ಗವ್ವರ್ನರ ಮತ್ತು ಇನ್ನಿತರ ಅಧಿಕಾರಿಗಳನ್ನು ನಿಯಮಿಸುತ್ತ ತನ್ನ ವ್ಯವಹಾರವನ್ನು ವರ್ಧಿಸಿಕೊಂಡು ತನ್ನ ಅಧಿಪತ್ಯದಲ್ಲಿದ್ದ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸುವ ದಿಸೆಯಲ್ಲಿ ಪ್ರಯತ್ನಿಸಲಾರಂಬಿಸಿತು.

ಸೂರತ ವ್ಯಾಪಾರದ ಅತ್ಯಂತ ಆಯಕಟ್ಟಿನ ಸ್ಥಾನವಾಗಿತ್ತು. ಅದು ನಂತರ ರಾಷ್ಟ್ರೀಯ ಬಂದರಗಳಲ್ಲೊಂದಾಗಿತ್ತು. 1615 ರಲ್ಲಿ ಥಾಮಸ್ ರೋ ಎಂಬ ಕಾರ್ಯಭಾರಿಯು ಮೊಘಲ ಸಾಮ್ರಾಟರಿಂದ ಹಲವಾರು ಅಧಿಕಾರಗಳನ್ನು ಪಡೆಯುವಲ್ಲಿ ಯಶಸ್ವಿಯಾದನು. ಅದರಲ್ಲಿ ಅತ್ಯಂತ ಪ್ರಾಮುಖ್ಯವಾದ ಸ್ವಂತ ಸರಕಾರ ಸ್ಥಾಪನೆ ಹಕ್ಕು ಅತ್ಯಂತ ಮಹತ್ವದ್ದಾಗಿತ್ತು. ಈ ರೀತಿಯಾದ ಸವಲತ್ತುಗಳಿಂದಾಗಿ, ಬ್ರಿಟಿಷರು ಎರಡು ಬಗೆಯಾದ ಕಾನೂಗಳಿಂದ ಹಕ್ಕು ಬಾಧ್ಯತೆಗಳನ್ನು ಗಳಿಸಿದರು. ಯಾವುದೇ ಒಂದು ಪ್ರಕರಣವು ಬ್ರಿಟಿಷ ಮತ್ತು ಭಾರತೀಯರ ನಡುವಿನದ್ದಾಗಿದ್ದರೆ, ಅವುಗಳ ನಿರ್ಣಯವನ್ನು ಸ್ಥಾನಿಕ ನ್ಯಾಯಾಲಯಗಳ ಮೂಲಕ ಭಾರತೀಯ ಕಾನೂನಿಗನುಸಾರವಾಗಿ ಮತ್ತು ಇಂಗ್ಲೀಷ ಪ್ರಜೆಗಳ ನಡುವೆ ಉದ್ಭವಿಸಬಹುದಾದ ಪ್ರಕರಣಗಳನ್ನು ಬ್ರಿಟಿಷ್ ನ್ಯಾಯಾಲಯಗಳಲ್ಲಿ ಬ್ರಿಟಿಷ ಕಾನೂನು ಮೂಲಕ ಇತ್ಯರ್ಥಪಡಿಸಬೇಕೆಂಬ ನಿಯಮವು ಜಾರಿಯಲ್ಲಿ ಬಂತು. ಇದಾದ ಕೆಲ ವರ್ಷಗಳಲ್ಲಿ ಬ್ರಿಟಿಶ್ ಕಂಪನಿಯು ತನ್ನ ಕಾರ್ಯಭಾರವನ್ನು ಮುಂಬಯಿ ಕಲಕತ್ತಾ, ಪ್ರದೇಶಗಳಿಗೂ ವಿಸ್ತರಿಸಿ ಸಮಗ್ರ ಮದ್ರಾಸ, ಮುಂಬಯಿ, ಕಲಕತ್ತಾ ಪ್ರದೇಶಗಳು ಕಂಪನಿಯ ಆಡಳಿತಕ್ಕೊಳಪಟ್ಟ ಪ್ರದೇಶಗಳಾದವು.

## 1. ರಾಜಸನ್ನದು ಕಾಯ್ದೆ 1683 ಮತ್ತು ಅಡ್ಮಿರಾಲ್ಟಿ ನ್ಯಾಯಾಲಯಗಳ ಸ್ಥಾಪನೆ (Charter Act of 1683 and the establishment of Admiralty Courts)

1600 ನೇ ಇಸ್ವಿಯಲ್ಲಿ ಈಸ್ಟ ಇಂಡಿಯಾ ಕಂಪನಿಗೆ ದೊರೆತ ರಾಜಸನ್ನದಿಗನುಗುಣವಾಗಿ ಭಾರತದಲ್ಲಿ ವಾಣಿಜ್ಯ ವ್ಯವಹಾರವನ್ನು ಮಾಡಬಹುದಾದ ಏಕಸ್ವಾಮ್ಯ ಪ್ರಭುತ್ವವನ್ನು ಹೊಂದಿರುವುದಾಗಿದ್ದರೂ, ಹಣದಾಸೆಯಿಂದ ಹಲವಾರು ವರ್ತಕರು ಅನಧಿಕೃತವಾದ ವಾಣಿಜ್ಯ ವ್ಯವಹರಣೆಯನ್ನು ಮಾಡತೊಡಗಿದರು. ಇದಕ್ಕೆ ಪೂರಕವಾಗಿ ಬಹು ಪ್ರಮಾಣದಲ್ಲಿ ಕಡಲ್ಗಳ್ಳತನ ಇತ್ಯಾದಿಗಳ ಹಾವಳಿ ಅತಿಯಾಗತೊಡಗಿತು. ಅದಕ್ಕಾಗಿ ಇವುಗಳಿಂದಾಗಬಹುದಾದ ತೊಂದರೆಯನ್ನು ನಿವಾರಿಸಲು ಮತ್ತು ಇವುಗಳಿಂದ ಉದ್ಭವಿಸಬಹುದಾದ ವ್ಯಾಜ್ಯಗಳನ್ನು ಬಗೆಹರಿಸಲು ಬ್ರಿಟಿಶ್ ಸಾಮ್ರಾಟನು 1683 ರಲ್ಲಿ ಕಂಪನಿಗೆ ತನಗೆ ಅವಶ್ಯ ಕಂಡ ಸ್ಥಳಗಳಲ್ಲಿ ಒಂದು ಅಥವಾ ಅದಕ್ಕಿಂಥಲೂ ಹೆಚ್ಚು ನ್ಯಾಯಾಲಯಗಳನ್ನು ಸ್ಥಾಪಿಸಬಹುದಾದಂಥಹ ಅನುಮತಿಯನ್ನು ನೀಡಿದನು. ಈ ರೀತಿಯಾಗಿ

ಅಸ್ತಿತ್ವದಲ್ಲಿ ಬಂದ ನ್ಯಾಯಾಲಯಗಳಿಗೆ ಅಡ್ಮಿರಾಲ್ಟಿ ನ್ಯಾಯಾಲಯ (Admiralty Courts) ಎಂದು ಹೆಸರಿಸಲಾಯಿತು.

ಈ ಸನ್ನದು ಕಾಯ್ದೆಗನುಗುಣವಾಗಿ, ಈ ನ್ಯಾಯಾಲಯಗಳು ಒಬ್ಬ ಸಿವಿಲ್ ನ್ಯಾಯವಾದಿ ಮತ್ತು ಕಂಪನಿಯಿಂದ ನೇಮಕಗೊಂಡ ಇಬ್ಬರು ವರ್ತಕರನ್ನು ಒಳಗೊಂಡಿದ್ದವು. ಈ ನ್ಯಾಯಾಲಯಗಳು ವಾಣಿಜ್ಯ ಕ್ಷೇತ್ರದಲ್ಲಿ ವ್ಯಾವಹಾರಿಕ ವಾಗಿ ಬಳಕೆಯಲ್ಲಿದ್ದ ಪದ್ಧತಿಗಳನ್ನು ಅನುಲಕ್ಷಿಸಿ, ಸೌಹಾರ್ದತೆ ಮತ್ತು ಸಮತಾ ವಾದವನ್ನು ಗಮನದಲ್ಲಿಟ್ಟುಕೊಂಡು ವಾಣಿಜ್ಯ ವ್ಯವಹಾರಕ್ಕೆ ಸಂಬಂಧಪಟ್ಟ ವ್ಯಾಜ್ಯಗಳನ್ನು, ಕಡಲ್ಗಳ್ಳತನ ಅಪರಾಧಗಳ ನ್ಯಾಯಿಕ ನಿರ್ಣಯವನ್ನು ನೀಡುವ ಅಧಿಕಾರವನ್ನು ಪಡೆದುಕೊಂಡಿದ್ದವು. ಈ ನ್ಯಾಯಾಲಯದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ ನ್ಯಾಯವಾದಿಗೆ ನ್ಯಾಯವಾದಿ ನ್ಯಾಯಾಧೀಶ(Judge-Advocate) ಎಂದು ಕರೆಯಲಾಗುತ್ತಿತ್ತು.

ಅಡ್ಮಿರಾಲ್ಟಿ ನ್ಯಾಯಾಲಯವು ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಸ್ಥಾಪನೆ ಗೊಂಡಿದ್ದರೂ, ಆ ಮುಂದೆ ಈ ನ್ಯಾಯಾಲಯವು ಮದ್ರಾಸದಲ್ಲಿ ಸರ್ವ ಸಾಮಾನ್ಯ ನ್ಯಾಯಾಲಯವಾಗಿ ಸಿವಿಲ್, ಕ್ರಿಮಿನಲ್ ಮತ್ತು ವಾಣಿಜ್ಯ ವ್ಯವಹರಣೆಗೆ ಸಂಬಂಧಪಟ್ಟ ವ್ಯಾಜ್ಯಗಳನ್ನು ನಿರ್ಣಯಿಸುವ ಕಾರ್ಯವನ್ನು ನಿರ್ವಹಿಸ ತೊಡಗಿತು.

## 2. ರಾಜಸನ್ನದು ಕಾಯ್ದೆ, 1726 ಮತ್ತು ಮೇಯರ ಕೋರ್ಟ ಸ್ಥಾಪನೆ (The Charter Act of 1726 and the establishment of the Mayor's Court)

ಪ್ರೆಸಿಡೆನ್ಸಿ ಪಟ್ಟಣಗಳಿಂದ, ಮುಂಬಯಿ, ಕಲಕತ್ತಾ ಮತ್ತು ಮದ್ರಾಸ ಪಟ್ಟಣಗಳಲ್ಲಿ ಕಂಪನಿಯ ವ್ಯಾಪಾರ ವಾಣಿಜ್ಯವು ವಿಶೇಷವಾಗಿತ್ತು. ಇಲ್ಲಿಯ ಜನಸಂಖ್ಯೆ ವಿಪರೀತವಾಗಿತ್ತು. ಇದರಿಂದಾಗಿ ಸುವ್ಯವಸ್ಥಿತ ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯದಾನದ ಅವಶ್ಯಕತೆಯು ಅತಿಯಾಗಿತ್ತು. ಅಲ್ಲದೆ, ಯಾವನೇ ಇಂಗ್ಲೀಷ ಪ್ರಜೆಯು ವಾರಸುದಾರರಿಲ್ಲದೆ ಮರಣ ಹೊಂದಿದಲ್ಲಿ ಅವನ ಸ್ವತ್ತನ್ನು ಸಾರ್ವಜನಿಕ ಹರಾಜು ಮೂಲಕ ಮಾರಾಟಮಾಡಿ ಆ ಹಣವನ್ನು ಇಂಗ್ಲಂಡದಲ್ಲಿ ರುವ ಅವನ ಕಾನೂನುಬದ್ಧ ವಾರಸುದಾರರಿಗಾಗಿ ಕಾಯ್ದಿರಿಸಬಹುದಾದ ಪದ್ಧತಿಯು ಬಳಕೆಯಲ್ಲಿತ್ತು. ಇದರಿಂದಾಗಿ ಭಾರತದಲ್ಲಿ ವ್ಯಾಜ್ಯಗಳುದ್ಭವಿಸಿ ಅದರಿಂದ ನೀಡಬಹುದಾದ ಪರಿಹಾರವನ್ನು ಇಂಗ್ಲೀಷ ನ್ಯಾಯಾಲಯಗಳ ಆದೇಶ ಕ್ಕನುಗುಣವಾಗಿ ಕಂಪನಿಯು ನೀಡಬೇಕಾಗುತ್ತಿತ್ತು. ಇಂಥಹ ಸಂದಿಗ್ಧ ಪರಿಸ್ಥಿತಿ ಯನ್ನು ಕಂಪನಿಯು ಕೊನೆಗಾಣಿಸಲು ಅವಕಾಶಕ್ಕೆ ಕಾಯುತ್ತಿತ್ತು. ಮೇಲಾಗಿ, ಭಾರತದಲ್ಲಿಯ ಕಂಪನಿ ನ್ಯಾಯಾಲಯಗಳ ನಿರ್ಣಯಗಳನ್ನು ಬ್ರಿಟಿಶ್ ನ್ಯಾಯಾ ಲಯಗಳ ಮುಂದೆ ಆವ್ಹಾನಿಸಲಾಗುತ್ತಿತ್ತು. ಅದರಿಂದಾಗಿ ಅನೇಕ ಸಮಸ್ಯೆಗಳು ಉದ್ಭವಿಸಲಾರಂಬಿಸಿದವು. ಅಂತೆಯೇ, ಕಂಪನಿಯೂ ಸಹ ಈ ಸಮಸ್ಯೆಗಳಿಗೆ ಶಾಶ್ವತ ಪರಿಹಾರವನ್ನು ಕಂಡುಕೊಳ್ಳುವ ಪ್ರಬಲ ಇಚ್ಛೆಯನ್ನು ಹೊಂದಿತ್ತು.

ಇದರಿಂದಾಗಿ ಕಂಪನಿಯು ಬ್ರಿಟಿಶ್ ಸರಕಾರಕ್ಕೆ ಒಂದು ಮನವಿಯನ್ನು ಸಲ್ಲಿಸಿ, ತನಗೆ ಇನ್ನೂ ಹೆಚ್ಚಿನ ಅಧಿಕಾರಗಳನ್ನು ನೀಡುವ ಮತ್ತು ನ್ಯಾಯದಾನ ಮತ್ತು ನ್ಯಾಯಯುತ ಆಡಳಿತ ನಡೆಸುವ ಅವಕಾಶ ಕಲ್ಪಿಸಿಕೊಡುವಂತೆ ಕೇಳಿತು. ಅದರಿಂದಾಗಿ ಬ್ರಿಟಿಶ್ ಸರಕಾರವು ಕಂಪನಿಗೆ 1726 ರಾಜ ಸನ್ನದನ್ನು ನೀಡಿತು.

ಮೂರು ಪ್ರೆಸಿಡೆನ್ಸಿ ಪ್ರದೇಶಗಳಲ್ಲಿ ಮೂರು ಸ್ವನಿಯಂತ್ರಿತ ಸಂಸ್ಥೆಗಳು ಸ್ಥಾಪನೆಗೊಂಡವು. ಪ್ರತಿಯೊಂದು ಸಂಸ್ಥೆಯಲ್ಲಿ ಒಬ್ಬ ಮೇಯರ ಮತ್ತು ಒಂಭತ್ತು ಜನ ಊರಪ್ರಮುಖ (Aldermen) ರನ್ನು ನಿಯಮಿಸಲು ಅವಕಾಶ ಕಲ್ಪಿಸಲಾಗಿತ್ತು. ಮೇಯರ ಮತ್ತು ಏಳು ಜನ ಊರ ಪ್ರಮುಖರು ಮೂಲ ಬ್ರಿಟಿಶ್ ಪ್ರಜೆಗಳಾಗಿದ್ದರೆ, ಇನ್ನುಳಿದ ಇಬ್ಬರನ್ನು ಮೈತ್ರಿ ರಾಜ್ಯದ ಸದಸ್ಯರಿಂದ ನಾಮಕರಣ ಮಾಡಲಾಗುತ್ತಿತ್ತು. ಮೊದಲನೇ ಮೇಯರ ಮತ್ತು ಊರ ಪ್ರಮುಖರನ್ನು ರಾಜಸನ್ನದಿನಲ್ಲಿಯೇ, ಹೆಸರಿಸಲಾಗಿತ್ತು. ಆ ನಂತರದಲ್ಲಿ ಮೇಯರನನ್ನು ಹಿಂದಿನ ಮೇಯರ ಮತ್ತು ಊರ ಪ್ರಮುಖರಿಂದ ಚುನಾಯಿಸಲಾಗುತ್ತಿತ್ತು. ಯಾವುದೇ ನಿರ್ದಿಷ್ಟ ಕಾರಣದಿಂದಾಗಿ ಗವ್ಹರ್ನರ ಜನರಲ್‌ನಿಂದ ತೆಗೆದುಹಾಕಲ್ಪಟ್ಟರೆ ಇಲ್ಲವೇ ಅವನು ಆ ಪಟ್ಟಣವನ್ನು ಅಂತಿಮವಾಗಿ ತ್ಯಜಿಸುವುದರಿಂದ ಅವನು ಊರ ಪ್ರಮುಖ ಸ್ಥಾನದಿಂದ ನಿವೃತ್ತನಾಗಿರುವುದಾಗಿ ತಿಳಿಯಲಾಗುತ್ತಿತ್ತು. ಗವ್ಹರ್ನರ ಜನರಲ್‌ನ ನಿರ್ಣಯದ ವಿರುದ್ಧ ಪ್ರಿವ್ಹಿ ಕೌನ್ಸಿಲ್‌ಕ್ಕೆ ಮೇಲ್ಮನವಿ ಸಲ್ಲಿಸಲು ಅವಕಾಶವಿತ್ತು. ಇವೆರಡು ಸಂದರ್ಭಗಳ ಅನುಪಸ್ಥಿತಿಯಲ್ಲಿ ಊರ ಪ್ರಮುಖನು ತನ್ನ ಜೀವಾವಧಿಯುವರೆಗೂ ಆ ಸ್ಥಾನದಲ್ಲಿ ಮುಂದುವರೆಯಬಹುದಾಗಿತ್ತು. ಊರ ಪ್ರಮುಖ ಸ್ಥಾನದಲ್ಲಿ ಉಂಟಾದ ರಿಕ್ತತೆಯನ್ನು ಮೇಯರ ಮತ್ತು ಇನ್ನುಳಿದ ಊರ ಪ್ರಮುಖರಿಂದ ತುಂಬಲಾಗುತ್ತಿತ್ತು. ಈ ರೀತಿಯಾಗಿ ಈ ಸಂಸ್ಥೆಯು ಪ್ರೆಸಿಡೆನ್ಸಿ ಪಟ್ಟಣಗಳ ಒಳಾಡಳಿತವನ್ನು ನೋಡಿಕೊಳ್ಳುವ ಸ್ವನಿಯಂತ್ರಿತ ಅಸ್ತಿತ್ವವಾಗಿ ಮಾರ್ಪಾಡುಗೊಂಡಿತು.

ಈ ರಾಜ ಸನ್ನದಿಗನುಗುಣವಾಗಿ ಪ್ರೆಸಿಡೆನ್ಸಿ ಪಟ್ಟಣಗಳಲ್ಲಿ ಮೇಯರ್ ಕೋರ್ಟುಗಳು ಸ್ಥಾಪನೆಗೊಂಡವು. ಈ ನ್ಯಾಯಾಲಯಗಳ ನಿರ್ಣಯದ ವಿರುದ್ಧ ರಾಜ ಶಾಸಕಾಂಗಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿತ್ತು. ಈ ರಾಜಸನ್ನದು ಕ್ರಿಮಿನಲ್ ನ್ಯಾಯದಾನದಲ್ಲಿ ಸಾಕಷ್ಟು ಸುಧಾರಣೆಯನ್ನು ಮಾಡಿತಲ್ಲದೆ, ಕಂಪನಿಗೆ ಹಲವು ರೀತಿಯ ಕಾನೂನು ನಿರ್ಮಾಣದ ಅಧಿಕಾರವನ್ನು ನೀಡಿತು. ಈ ನ್ಯಾಯಾಲಯವು ಮೂರು ಜನರನ್ನು ಒಳಗೊಂಡಿತ್ತು. ಒಬ್ಬ ಮೇಯರ, ಅಥವಾ ಹಿರಿಯ ಊರ ಪ್ರಮುಖ ಮತ್ತು ಇನ್ನುಳಿದ ಇಬ್ಬರು ಊರ ಪ್ರಮುಖರು ಈ ನ್ಯಾಯಾಲಯದ ಅವಶ್ಯಸಂಖ್ಯೆ (quorum) ಎಂದು ಪರಿಗಣಿಸಲ್ಪಡುತ್ತಿತ್ತು. ಮೇಯರ ಕೋರ್ಟು ಅಭಿಲೇಖ ನ್ಯಾಯಾಲಯವೆಂದು ಪರಿಗಣಿಸಲ್ಪಡುತ್ತಿತ್ತು. ಅಂತೆಯೇ, ಅದರ ನಿಂದನೆಗಾಗಿ ದಂಡಿಸುವ ಅಧಿಕಾರವನ್ನು ಹೊಂದಿತ್ತು.

ಈ ನ್ಯಾಯಾಲಯಕ್ಕೆ, ಆ ಪಟ್ಟಣದ ವ್ಯಾಪ್ತಿಯಲ್ಲಿ ಬರುವ ಎಲ್ಲ ರೀತಿಯ ಸಾಮಾನ್ಯ ಮತ್ತು ಸಿವ್ಹಿಲ್ ಹಾಗೂ ಇನ್ನಿತರ ವಿಷಯುಗಳನ್ನು ಕುರಿತು ನಿರ್ಣಯಿಸುವ ಅಧಿಕಾರವಿತ್ತು. ಇದರ ನಿರ್ಣಯದ ಮೇಲೆ ಗವ್ಹರ್ನರ ಜನರಲ್ ಅಥವಾ ನೇರವಾಗಿ ರಾಜಮಂತ್ರಾಲೋಚನ ಸಭೆ (King in Council) ಗೆ ಮೇಲ್ಮನವಿಯನ್ನು ಸಲ್ಲಿಸಲು ಅವಕಾಶವಿತ್ತು. ಒಂದು ಸಾವಿರ ಪಗೋಡಗಳ ವರೆಗೆ ಗವ್ಹರ್ನರ ಜನರಲ್ ಮಂತ್ರಾಲೋಚನ ಸಭೆ (Governer-General in Council)ಯ ತೀರ್ಮಾನವು ಅಂತಿಮವಾಗಿದ್ದರೆ, ಅದಕ್ಕಿಂಥ ಹೆಚ್ಚಿನ ಮೊತ್ತದ ವ್ಯಾಜ್ಯಗಳಲ್ಲಿ, ರಾಜಮಂತ್ರಾಲೋಚನ ಸಭೆಗೆ ಮೇಲ್ಮನವಿಯನ್ನು ಸಲ್ಲಿಸಬೇಕಾಗುತ್ತಿತ್ತು. ಮರಣ ಶಾಸನಕ್ಕೆ ಸಂಬಂಧಪಟ್ಟ ವಿಷಯುಗಳ ತೀರ್ಮಾನದಲ್ಲಿ ಈ ನ್ಯಾಯಾಲಯಕ್ಕೆ ಉತ್ತರಾಧಿಕಾರಿ ಅಧಿಕಾರ ಪತ್ರವನ್ನು (Probate) ಸ್ವತ್ತು ನಿಯಂತ್ರಣ ಅಧಿಕಾರ ಪತ್ರ (Letters of administration) ನೀಡುವ ಅಧಿಕಾರವನ್ನು ಹೊಂದಿತ್ತು.

ನ್ಯಾಯಾಲಯದ ನಿರ್ಣಯಗಳನ್ನು ಅನುಷ್ಠಾನಗೊಳಿಸುವುದಕ್ಕೆಂದು ಗವ್ಹರ್ನರ ಜನರಲ್ ಮಂತ್ರಾಲೋಚನ ಸಭೆಯು ಕಿರಿಯ ಸದಸ್ಯನೊಬ್ಬನನ್ನು ನಿಯಮಿಸಲಾಗುತ್ತಿದ್ದು ಅವನನ್ನು ಶೆರೀಫ (Sheriff) ಎಂದು ಕರೆಯುಲಾಗುತ್ತಿತ್ತು. ನ್ಯಾಯಾಲಯದ ಮುಂದೆ ಹಾಜರಾಗಲು ಆಜ್ಞಾಪಿಸಿದ ವ್ಯಕ್ತಿಗಳು ತಪ್ಪಿದಲ್ಲಿ ಅವರನ್ನು ವಾರಂಟ ಮೂಲಕ ಬಂಧಿಸಿ ಹಾಜರಾತಿ ಪಡಿಸುವ ಅಧಿಕಾರವನ್ನು ಹೊಂದಿತ್ತು.

ಕ್ರಿಮಿನಲ್ ನ್ಯಾಯದಾನಕ್ಕೆ ಸಂಬಂಧಿಸಿದಂತೆ ಒಂದು ಸೆಶೆನ್ಸ ನ್ಯಾಯಾಲಯ ಮತ್ತು ಶಾಂತಿ ನ್ಯಾಯಕ ಸಭೆ (Justice of peace) ಯನ್ನು ಸ್ಥಾಪಿಸಲು ಅವಕಾಶವಿತ್ತು.

ಸೆಶೆನ್ಸ ನ್ಯಾಯಾಲಯವು ಗವ್ಹರ್ನರ ಮತ್ತು ಇನ್ನಿತರ ಐದು ಜನ ಹಿರಿಯ ಸದಸ್ಯರನ್ನು ಒಳಗೊಂಡಿರುತ್ತಿತ್ತು. ಇದೇ ಜನರು ಶಾಂತಿ ನ್ಯಾಯಿಕ ಸಭೆಯ ಸದಸ್ಯರೂ ಆಗಿರುತ್ತಿದ್ದರು. ಶಾಂತಿ ನ್ಯಾಯಿಕ ಸಭೆಯು ಇಂಗ್ಲಂಡದಲ್ಲಿ ಅಸ್ತಿತ್ವದಲ್ಲಿದ್ದ ಶಾಂತಿ ನ್ಯಾಯಿಕ ಸಭೆಯ ಕಾರ್ಯಕ್ಕೆ ಸಮಾನವಾದ ಕಾರ್ಯವನ್ನು ಮಾಡುತ್ತಿತ್ತು.

ಸೆಶೆನ್ಸ ನ್ಯಾಯಾಲಯದಲ್ಲಿ, ವಿಚಾರಣೆಯು ಜ್ಯೂರಿ (Jury) ಗಳ ಮೂಲಕ ನಡೆಯುತ್ತಿತ್ತು. ಎರಡು ಪ್ರಕಾರದ ಜ್ಯೂರಿಗಳನ್ನು ನಿಯಮಿಸಲು ಅವಕಾಶವಿತ್ತು. —ಗ್ರ್ಯಾಂಡ್ ಜ್ಯೂರಿ ಮತ್ತು ಪೆಟ್ಟೀ ಜ್ಯೂರಿ. ಈ ನ್ಯಾಯಾಲಯವು ಒಂದು ವರ್ಷದಲ್ಲಿ ನಾಲ್ಕು ಸಲ ಸಭೆ ಸೇರುತ್ತಿತ್ತು. ಗ್ರ್ಯಾಂಡಜೂರಿಯು ಕೇವಲ ವಿಚಾರಣೆಯನ್ನು ಮಾತ್ರ ನಡೆಸುವವನಾಗಿದ್ದು ಅವನು ನ್ಯಾಯಾಧೀಶನಾಗಿರುತ್ತಿರಲಿಲ್ಲ. ಆದರೆ ಪೆಟ್ಟೀ ಜ್ಯೂರಿಯ ಸಣ್ಣ ಪುಟ್ಟ ಅಪರಾಧಿಗಳನ್ನು ವಿಚಾರಿಸಿ ಅವುಗಳ ನಿರ್ಣಯವನ್ನು ಕೊಳ್ಳುವ ಅಧಿಕಾರವನ್ನು ಹೊಂದಿದ್ದನು.

ಶಾಸನ ರಚನೆಯ ಅಧಿಕಾರವು ಇಂಗ್ಲಂಡದಲ್ಲಿ ಅಸ್ತಿತ್ವದಲ್ಲಿದ್ದ ಕಂಪನಿಯ

ಸಾಮಾನ್ಯ ಸಭೆಯಿಂದ ನಿರ್ವಹಿಸಲ್ಪಡುತ್ತಿರುವುದರಿಂದ ಅನೇಕ ಸಮಸ್ಯೆಗಳು ಉದ್ಭವಿಸಲಾರಂಭಿಸಿದವು. ಯಾಕೆಂದರೆ, ಇಲ್ಲಿಯ ಪರಿಸರ ಇಂಗ್ಲೆಂಡದ ಪರಿಸರಕ್ಕಿಂತ ಭಿನ್ನ ಸ್ವರೂಪದ್ದಾಗಿತ್ತು. ಅಂತೆಯೇ, ಈ ಸನ್ನದು ಗವ್ಹರ್ನರ ಜನರಲ್ ಮಂತ್ರಾಲೋಚನೆ ಸಭೆಗೆ, ನಿಯಮ ನಿಯಮಾವಳಿಗಳನ್ನು ನಿರೂಪಿಸುವ ಅಧಿಕಾರ ವನ್ನು ನೀಡಿತು. ಈ ನಿಯಮಾವಳಿಗಳು ಇಂಗ್ಲೆಂಡದ ನ್ಯಾಯಾಲಯ ನಿರ್ದೇಶಕ ಮಂಡಳಿಯ ಅನುಮತಿಯನ್ನು ಪಡೆಯಬೇಕಿತ್ತು.

1726 ರಾಜ ಸನ್ನಧಿನಲ್ಲಿ ಮೇಯರ ಕೋರ್ಟುಗಳಲ್ಲಿ ಅನುಸರಿಸಬಹುದಾದ ಕಾನೂನು ಕುರಿತು ಯಾವ ಸಮೂದನೆಯನ್ನೂ ಮಾಡಿರಲಿಲ್ಲ. ಆದರೂ ಅವರು ನ್ಯಾಯ ಮತ್ತು ಸಮತಾವಾದವನ್ನು ಆಧರಿಸಿ ನ್ಯಾಯ ನಿರ್ಣಯವನ್ನು ಮಾಡ ಬೇಕೆಂಬ ಅಧಿಕಾರವನ್ನು ನೀಡಲಾಗಿತ್ತು. ಮೇಯರ ಕೋರ್ಟುಗಳಲ್ಲಿಯ ಮೇಯರ ರಾಗಲೀ, ಊರ ಪ್ರಮುಖರಾಗಲೀ, ಕಾನೂನುಪಂಡಿತರಾಗಿರಲಿಲ್ಲ. ಅವರ ಉಪಯೋಗಕ್ಕೆಂದು ಇಂಗ್ಲೆಂಡದಿಂದ ಕಾನೂನು ಪುಸ್ತಕಗಳನ್ನು ಕಳಿಸಿರುವುದ ರಿಂದಾಗಿ, ನ್ಯಾಯದಾನದಲ್ಲಿ ಅನೇಕ ತೊಂದರೆಗಳು ಕಾಣಿಸಿಕೊಂಡವು. ರಾಜ ಸನ್ನದನ್ನು ಪಡೆದುಕೊಂಡ ಮೇಯರ ಕೋರ್ಟುಗಳು ರಾಜನಿಂದ ನೇರವಾದ ಅಧಿಕಾರವನ್ನು ಪಡೆದುಕೊಂಡವಾದ್ದರಿಂದ, ಕಂಪನಿಯಿಂದ ಸ್ವಾಯತ್ತತೆಯನ್ನು ಬಯಸಿದವು. ಆದರೆ ನ್ಯಾಯದಾನ ಕಾರ್ಯದಲ್ಲಿ ಗವ್ಹರ್ನರ್ ಜನರಲ್‌ನ್ನು ಹಸ್ತ ಕ್ಷೇಪ ಮಾಡತೊಡಗಿದ್ದರಿಂದ, ನ್ಯಾಯಾಲಯದ ಕಾರ್ಯದಲ್ಲಿ ಅಡೆ ತಡೆಯುಂಟಾಗಿ ಅನೇಕ ರೀತಿಯ ತೊಂದರೆಗೆ ಕಾರಣವಾಯಿತು.

### 3. ಅದಾಲತ ಪದ್ಧತಿ (Adalat System) ಅಥವಾ ವಾರೆನ್ ಹೇಸ್ಟಿಂಗ್ಸ್‌ನ 1772ರ ನ್ಯಾಯಿಕ ಯೋಜನೆ (Warren Hastings Judicial Plan of 1772)

ಮೂಲತಃ ಕಂಪನಿಯು ತನ್ನ ದಿವಾಣೀ ಕಾರ್ಯಗಳನ್ನು ಭಾರತೀಯ ಅಧಿಕಾರಿಗಳ ಮೂಲಕ ನಿರ್ವಹಿಸುತ್ತಲಿತ್ತು. ಸ್ಥಾನಿಕ ನವಾಬರು ಕ್ರಿಮಿನಲ್ ನ್ಯಾಯದಾನ ಕಾರ್ಯವನ್ನು ನಿರ್ವಹಿಸುತ್ತಲಿದ್ದರೆ, ಸ್ಥಾನಿಕ ಜಮೀನಂದಾರರು ತಮ್ಮದೇ ಆದ ಕ್ರಿಮಿನಲ್ ಮತ್ತು ದೀವಾಣೀ ನ್ಯಾಯದಾನ ಕಾರ್ಯ ನಿರ್ವಹಿಸುತ್ತ ಲಿದ್ದರು. ಅವರವರ ನ್ಯಾಯದಾನ ಪದ್ಧತಿಯು ಅಲ್ಲಿಯ ಧಾರ್ಮಿಕ ಆಚರಣೆಯ ತಳಹದಿಯನ್ನಾಧರಿಸಿದ್ದಾಗಿತ್ತು. ಇಬ್ಬಗೆಯ ಸರಕಾರ ಕಾರ್ಯ ವೈಖರಿ ಅವ್ಯ ವಸ್ಥೆಗೆ ಕಾರಣವಾಯಿತು. ಸ್ಥಾನಿಕ ನವಾಬರಿಗೆ ಹೊಣೆಗಾರಿಕೆ ಇತ್ತೆ ವಿನಃ ಅಧಿಕಾರ ವಿರಲಿಲ್ಲ ಮತ್ತು ಕಂಪನಿಗೆ ಅಧಿಕಾರವಿತ್ತು, ಆದರೆ ಹೊಣೆಗಾರಿಕೆ ಇರಲಿಲ್ಲ. ಕಂಪನಿಯ ನಿರ್ದೇಶಕರು ಈ ಸಮಸ್ಯೆಯ ಪರಿಹಾರಕ್ಕೆ ಉಪಾಯವನ್ನು ಕಂಡು ಹಿಡಿಯುವ ಕುರಿತು ಚಿಂತಿಸತೊಡಗಿದರು. 1772 ರಲ್ಲಿ ಕಂಪನಿಯು ದೀವಾನ ಎಂದು ನೇರವಾಗಿ ಆಡಳಿತ ಕಾರ್ಯವನ್ನು ತನ್ನಲ್ಲಿಯೇ ಕೇಂದ್ರೀಕರಿಸಿಕೊಂಡಿತು ಮತ್ತು ವಾರೆನ್ ಹೇಸ್ಟಿಂಗ್ಸ್‌ನನ್ನು ಬಂಗಾಲ, ಬಿಹಾರ ಮತ್ತು ಓರಿಸ್ಸಾಗಳ ಗವ್ಹರ್ನರ ಎಂದು ನಿಯಮಿಸಲಾಯಿತು. ವಾರೆನ್ ಹೇಸ್ಟಿಂಗ್ಸ್‌ನು 1772 ರ ತನ್ನ

ನ್ಯಾಯಿಕ್ ನಿಯಂತ್ರಣ ಯೋಜನೆಯನ್ನಯ, ಕಂಪನಿಯ ಆಡಳಿತ ಮತ್ತು ನ್ಯಾಯ ನಿರ್ವಹಣೆ ಕಾರ್ಯದಲ್ಲಿ ಸಮಗ್ರ ಬದಲಾವಣೆಯನ್ನುಂಟು ಮಾಡಿದನು. ಅವನು ಬಂಗಾಲ ಬಿಹಾರ ಮತ್ತು ಓರಿಸ್ಸಾಗಳನ್ನು ಹಲವಾರು ಜಿಲ್ಲೆಗಳಾಗಿ ವಿಭಜಿಸಿದ ನಲ್ಲದೆ, ಪ್ರತಿಯೊಂದು ಜಿಲ್ಲೆಗೆ ಕಂಪನಿಯ ಇಂಗ್ಲೀಷ ಅಧಿಕಾರಿಯನ್ನು ಜಿಲ್ಲೆಯ ಕಲೆಕ್ಟರನನ್ನಾಗಿ ನಿಯಮಿಸಿದನು.

### (i) ದೀವಾಣೀ ನ್ಯಾಯ ನಿರ್ವಹಣೆ ವೈಖರಿ (Administration Civil justice)

ದೀವಾಣೀ ನ್ಯಾಯ ನಿರ್ವಹಣೆಗಾಗಿ, ಮೂರು ಪ್ರಕಾರದ ನ್ಯಾಯಾಲಯ ಗಳನ್ನು ಸ್ಥಾಪಿಸಲಾಯಿತು.

#### a) ಕನಿಷ್ಟ ಸಮಸ್ಯೆ ಪರಿಹಾರ ನ್ಯಾಯಾಲಯ ( Small Causes Adalat )

ಈ ನ್ಯಾಯಾಲಯಗಳು ಕ್ಷುಲ್ಲಕ ಸಮಸ್ಯೆಗಳ ಇತ್ಯರ್ಥ ಕಾರ್ಯ ನಿರ್ವಹಿಸು ವುಗಳಾಗಿದ್ದವು. ಕೇವಲ ಹತ್ತು ರೂಪಾಯಿ ಅಥವಾ ಅದಕ್ಕಿಂಥಲೂ ಕಮ್ಮಿ ಯಾದ ಮೊತ್ತ ಕುರಿತಾದ ವ್ಯಾಜ್ಯಗಳನ್ನು ತೀರ್ಮಾನಿಸುವ ಅರ್ಹತೆಯನ್ನು ಹೊಂದಿ ದವುಗಳಾಗಿದ್ದವು. ಆ ಜಿಲ್ಲೆಯ ಪ್ರಮುಖ ಜಮೀನುದಾರನು ಈ ನ್ಯಾಯಾಲ ಯದ ನ್ಯಾಯಾಧಿಕಾರಿಯಾಗಿದ್ದನು.

#### b) ಮೋಫ್ಯೂಸಿಲ್ ದೀವಾಣೀ ನ್ಯಾಯಾಲಯ (Mofussil Diwani Adalat)

ಈ ನ್ಯಾಯಾಲಯವು ಜಿಲ್ಲಾ ಮಟ್ಟದಲ್ಲಿ ಸ್ಥಾಪನೆಗೊಂಡಿರುವುದಾಗಿದ್ದು ಜಿಲ್ಲೆಯ ಕಲೆಕ್ಟರನು ಅದರ ನ್ಯಾಯಾಧೀಶನಾಗಿರುತ್ತಿದ್ದನು. ಎಲ್ಲ ರೀತಿಯ ದಿವಾಣೀ ವ್ಯಾಜ್ಯಗಳನ್ನು ಬಗೆಹರಿಸಬಹುದಾದ ಅರ್ಹತೆಯನ್ನು ಈ ನ್ಯಾಯಾ ಲಯವು ಹೊಂದಿತ್ತು. ಹಿಂದುಗಳ ವ್ಯಾಜ್ಯಗಳನ್ನು ಶಾಸ್ತ್ರವನ್ನಾಧರಿಸಿ ಪರಿಹರಿ ಸುವುದಾಗಿದ್ದರೆ, ಮುಸ್ಲೀಮ ಸಮಸ್ಯೆಗಳಿಗೆ ಅವರ ಧರ್ಮಗ್ರಂಥವಾದ ಕುರಾನ್ ಆಧಾರವಾಗಿತ್ತು. ಸ್ಥಾನಿಕ ಪಂಡಿತರು ಮತ್ತು ಖಾಜೀಗಳು ಕಲೆಕ್ಟರನಿಗೆ ನ್ಯಾಯ ದಾನ ಕಾರ್ಯದಲ್ಲಿ ಸಹಕರಿಸುತ್ತಲಿದ್ದರು. 500 ರೂಪಾಯಿಗಳ ಒಳಗಿನ ಮೊತ್ತ ಕುರಿತಾದ ವ್ಯಾಜ್ಯ ತೀರ್ಮಾನದಲ್ಲಿ ಈ ನ್ಯಾಯಾಲಯದ ನಿರ್ಣಯವು ಅಂತಿಮ ವಾಗಿದ್ದು ಅದರ ಮೇಲಿನ ಮೊತ್ತವಾಗಿದ್ದರೆ, ಕಲಕತ್ತೆಯಲ್ಲಿರುವ ಸದರ ದೀವಾಣೀ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದಾಗಿತ್ತು.

#### c) ಸದರ ದೀವಾಣೀ ನ್ಯಾಯಾಲಯ (Sadar Diwani Adalat)

ಇದು ದೀವಾಣೀ ವ್ಯಾಜ್ಯಗಳ ಮೇಲ್ಮನವಿ ನ್ಯಾಯಾಲಯವಾಗಿದ್ದು ಗವ್ಹರ್ನರ ಮತ್ತು ಮಂತ್ರಾಲೋಚನ ಸಭೆಯನ್ನೊಳಗೊಂಡಿತ್ತು. ಪ್ರತಿಶತ ಐದರಷ್ಟು ಮೊತ್ತವನ್ನು ಫೀ ರೂಪದಲ್ಲಿ ಸಂದಾಯ ಮಾಡಬೇಕಾಗುತ್ತಿತ್ತು.

ವಾದಿ ಪ್ರತಿವಾದಿಗಳಿಂದ ಆರೋಪ, ಪ್ರತ್ಯಾರೋಪಗಳನ್ನು ಪಡೆದು ಕೊಂಡಾದ ನಂತರ, ನ್ಯಾಯಾಲಯವು ವಿಚಾರಣೆಯನ್ನು ತೆರೆದ ಕೋರ್ಟಿನಲ್ಲಿ ನಡೆಯಿಸಿ ನಿರ್ಣಯಿಸಲಾಗುತ್ತಿತ್ತು. ವಿಚಾರಣೆಯ ಸಾರಾಂಶವನ್ನು ಸದರ ದೀವಾಣೀ ನ್ಯಾಯಾಲಯಕ್ಕೆ ಕಳುಹಿಸಲಾಗುತ್ತಿತ್ತು. ದೀವಾಣೀ ಪ್ರಕರಣಗಳ ವಿಚಾರಣೆಯಲ್ಲಿ 12 ವರ್ಷಗಳ ಅವಧಿಯನ್ನು ನಿಗದಿತಗೊಳಿಸಲಾಗಿದ್ದು ಆ ಅವಧಿಯ ನಂತರದ ವ್ಯಾಜ್ಯಗಳನ್ನು ಕಾನೂನು ಬಾಹಿರ ವ್ಯಾಜ್ಯಗಳೆಂದ. ಪರಿ ಗಣಿಸಲಾಗುತ್ತಿತ್ತು.

## (II) ಕ್ರಿಮಿನಲ್ ನ್ಯಾಯ ನಿರ್ಣಯ ವೈಖರಿ (Administration of criminal justice)

ವಾಸ್ತವಿಕವಾಗಿ ಕ್ರಿಮಿನಲ್ ನ್ಯಾಯ ನಿರ್ಣಯ ಅಧಿಕಾರವು ನವಾಬರಿಗೆ ಸೇರಿದ್ದಾಗಿದ್ದರಿಂದ, ಕಂಪನಿಯು ಅಷ್ಟೊಂದು ಜವಾಬ್ದಾರಿಯುತವಾಗಿ ಪರಿಗಣಿಸ ಲ್ಪಡುತ್ತಿರಲಿಲ್ಲ. ಆದರೆ, ನವಾಬರು ಅಲ್ಪ ವಯಸ್ಕರಾಗಿರುವುದರಿಂದ ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆಯನ್ನು ಕಾಪಾಡಿಕೊಳ್ಳುವಲ್ಲಿ ಅಸಮರ್ಥರಾಗಿದ್ದರು. ಅಂತೆಯೇ, ಕಂಪನಿಯು ಈ ದಿಸೆಯಲ್ಲಿ ಅಲಕ್ಷತೆಯನ್ನು ತೋರುವ ಹಾಗಿರಲಿಲ್ಲ. ವಾರೆನ್ ಹೇಸ್ಟಿಂಗ್ಸ್‌ನು ಕ್ರಿಮಿನಲ್ ನ್ಯಾಯ ನಿರ್ಣಯ ಕಾರ್ಯವನ್ನು ಸುರುಳಿತ ಗೊಳಿಸುವುದಕ್ಕಾಗಿ,ಮೊಫ್ಯೂಸಿಲ್ ಫೌಜದಾರಿ ನ್ಯಾಯಾಲಯಗಳನ್ನು (Mofussil Fozdari Adalat) ಜಿಲ್ಲಾ ಪ್ರದೇಶಗಳಲ್ಲೂ ಮತ್ತು ಸದರ ನಿಝಾಮತ ನ್ಯಾಯಾಲಯವನ್ನು (Sadar Nizamat Adalat) ಕಲಕತ್ತೆಯಲ್ಲಿಯೂ ಪ್ರಾರಂಭಿಸಿದನು.

### a) ಮೊಫ್ಯೂಸಿಲ್ ಫೌಜದಾರಿ ನ್ಯಾಯಾಲಯ (Mofussil Fozdari Adalat)

ಈ ನ್ಯಾಯಾಲಯವು ಕಾಜೀ, ಮುಫ್ತಿ, ಮತ್ತು ಮೌಲ್ವಿಗಳನ್ನು ಒಳ ಗೊಂಡಿತ್ತು. ಇಬ್ಬರು ಮೌಲ್ವಿಗಳು ಕಾನೂನು ಅನ್ವಯಗೊಳಿಸುತ್ತಿದ್ದರೆ, ಕಾಜೀ ಮತ್ತು ಮುಫ್ತಿಗಳು ಪ್ರಕರಣದ ವಿಚಾರಣೆಯನ್ನು ಮಾಡಿ ಮೌಲ್ವಿಗಳಿಂದ ಅನ್ವಯಗೊಳಿಗಲ್ಪಟ್ಟ ಕಾನೂನಿಗನುಗುಣವಾಗಿ ಪ್ರಕರಣದ ನಿರ್ಣಯವನ್ನು ಮಾಡುತ್ತಲಿದ್ದರು. ಅಪರಾಧಗಳ ವಿಚಾರಣೆಯು ಜಿಲ್ಲಾ ಕಲೆಕ್ಟರನ ಮೇಲ್ವಿ ಚಾರಣೆಯಲ್ಲಿ ನಡೆಯುತ್ತಿತ್ತು. ಮತ್ತು ವಿಚಾರಣೆಯು ತೆರೆದ ನ್ಯಾಯಾಲಯ ದಲ್ಲಿ ನಡೆಯುತ್ತಿತ್ತು. ಮರಣ ದಂಡನೆ ಮತ್ತು ಆಸ್ತಿ ಪಾಸ್ತಿಯ ಜಪ್ತಿ ಇವುಗಳ ಹೊರತಾದ ಎಲ್ಲ ಬಗೆಯ ಶಿಕ್ಷೆಯನ್ನು ಈ ನ್ಯಾಯಾಲಯವು ವಿಧಿಸಬಹುದಾಗಿತ್ತು.

### b) ಸದರ ನಿಝಾಮತ ನ್ಯಾಯಾಲಯ (Sadar Nizamat Adalat)

ಇದು ಸಾಮಾನ್ಯ ಮೇಲ್ಮನವಿ ಸಲ್ಲಿಸಬಹುದಾದ ನ್ಯಾಯಾಲಯವಾಗಿರಲಿಲ್ಲ. ಜಿಲ್ಲಾ ಫೌಜದಾರಿ ನ್ಯಾಯಾಲಯಗಳ ನಿರ್ಣಯ ಮತ್ತು ಕಾರ್ಯವನ್ನು ಮೇಲ್ವಿಚಾರ

ಮಾಡಬಹುದಾದ ಅಧಿಕಾರವನ್ನು ಹೊಂದಿತ್ತು. ಈ ನ್ಯಾಯಾಲಯವು ದರೋಗಾ ನ್ಯಾಯಾಲಯದ ಮೇಲ್ವಿಚಾರಣೆ ಮತ್ತು ಅಧ್ಯಕ್ಷತೆಯಲ್ಲಿ ನಡೆಯುತ್ತಿತ್ತು. ಅವನಿಗೆ ಸಹಾಯಕರಾಗಿ ಪ್ರಮುಖ ಕಾಜೀ, ಪ್ರಮುಖ ಮುಫ್ತಿ ಮತ್ತು ಮೌಲ್ವಿಗಳು ಕಾರ್ಯಮಾಡುತ್ತಿದ್ದರು. ದರೋಗಾ ನ್ಯಾಯಾಲಯದ ನೇಮಕಾತಿಯನ್ನು ನವಾಬನು ಗವರ್ನರನ ಆದೇಶಕ್ಕನುಗುಣವಾಗಿ ಮಾಡುತ್ತಿದ್ದನು. ಈ ನ್ಯಾಯಾಲಯದ ಪ್ರಾಮುಖ್ಯ ಕಾರ್ಯವೇನೆಂದರೆ, ಮೊಫ್ಯೂಸಿಲ್ ಫೌಜದಾರಿ ನ್ಯಾಯಾಲಯವು ವಿಧಿಸಿದ ದಂಡನೆಯನ್ನು ಮಾನ್ಯ ಮಾಡುವ ಇಲ್ಲವೆ ಶೂನ್ಯಗೊಳಿಸುವ ಅಥವಾ ಅದರಲ್ಲಿ ಮಾರ್ಪಾಡು ಮಾಡುವ ಅಧಿಕಾರವನ್ನು ಹೊಂದಿತ್ತು. ಮರಣ ದಂಡನೆಯನ್ನು ವಿಧಿಸಬಹುದಾದ ಆಜ್ಞಾ ಪತ್ರವನ್ನು ಸ್ವತಃ ನವಾಬನು ಸಹಿ ಮಾಡಬೇಕಿತ್ತು.

ವಾರೆನ್ ಹೇಸ್ಟಿಂಗ್ಸ್‌ನ ಇಬ್ಬಗೆಯ ನ್ಯಾಯಪದ್ಧತೀ ವಿಧಾನವು ಸುವ್ಯಸ್ಥಿತ ಮತ್ತು ಕಡಿಮೆ ವೆಚ್ಚದಲ್ಲಿ ನ್ಯಾಯದಾನವನ್ನು ಮಾಡುವ ದಿಸೆಯಲ್ಲಿ ಪ್ರಮುಖ ಹೆಜ್ಜೆ ಎಂದು ಪರಿಗಣಿಸಲ್ಪಡುತ್ತದೆ. ನ್ಯಾಯದಾನವು ಸರಕಾರಕ್ಕೆ ಸರಕಾರದ ಬೊಕ್ಕಸ ತುಂಬುವ ಪ್ರಮುಖ ಸಾಧನವೆಂದು ಪರಿಗಣಿಸಲ್ಪಡುವುದು ತಪ್ಪಿದಂತಾಯಿತು. ಹಲವಾರು ಬಗೆಯಲ್ಲಿ ಹಿಂದೂ ಮುಸ್ಲೀಮರ ವಾಜ್ಯಗಳನ್ನು ಅವರವರ ವೈಯಕ್ತಿಕ ಧಾರ್ಮಿಕ ತಳಹದಿಯನ್ನಾಧರಿಸಿದ ಕಾನೂನು ಅನ್ವಯಗೊಳಿಸಿ ನ್ಯಾಯ ನಿರ್ಣಯವನ್ನು ಮಾಡುವುದರಿಂದ ಈ ಪದ್ಧತಿಯು ಸರ್ವಮಾನ್ಯವಾಗಿ ಸ್ವೀಕೃತವಾಯಿತು.

ಪ್ರಾದೇಶಿಕ ನ್ಯಾಯಾಲಯಗಳು ಹಲವಾರು ಅಸ್ತಿತ್ವದಲ್ಲಿ ಬಂದವಾದರೂ, ಜಿಲ್ಲಾ ನ್ಯಾಯಾಲಯಗಳು ಅತೀ ಕಡಿಮೆ ಪ್ರಮಾಣದಲ್ಲಿದ್ದವು. ಅಲ್ಲದೆ, ಮೇಲ್ಮನವಿಗಾಗಿ ಜಿಲ್ಲಾ ನ್ಯಾಯಾಲಯಕ್ಕೆ ಹೋಗಿ ಬರುವ ಮತ್ತು ಅತ್ಯಂತ ತೊಂದರೆದಾಯಕವಾದ ಪ್ರವಾಸಿಕ ಅಡೆತಡೆಗಳಿಂದಾಗಿ ಅನೇಕ ತೊಂದರೆಗಳುಂಟಾದವು ಜಿಲ್ಲಾ ಕಲೆಕ್ಟರನು ಜಿಲ್ಲಾ ದೀವಾಣೀ ನ್ಯಾಯಾಲಯದ ನ್ಯಾಯಾಧೀಶನಾಗಿಯೂ, ಕ್ರಿಮಿನಲ್ ನ್ಯಾಯಾಲಯಗಳ ಉಸ್ತುವಾರಿಕೆಯನ್ನು ನೋಡಿಕೊಳ್ಳುವ ಅಧಿಕಾರವನ್ನು ಹೊಂದಿದವನಾಗಿಯೂ ಆದುದರಿಂದ ಅಧಿಕಾರವು ಒಂದೆಡೆಗೆ ಕೇಂದ್ರಿಕೃತವಾದಂತಾಯಿತು. ಆದರಿಂದಾಗಿ ಅವನು ಬಡ ಜನರ ಸುಲಿಗೆ ಮಾಡತೊಡಗಿದನಲ್ಲದೆ, ಅವನ ಈ ಅಧಿಕಾರ ನಿಯಂತ್ರಣವು ಅವಶ್ಯವೆಂದು ಪರಿಗಣಿಸಲ್ಪಡಲಾಯಿತು.

ಅಂತೆಯೇ, 1774 ರಲ್ಲಿ ಹಲವಾರು ಮಾರ್ಪಾಡುಗಳನ್ನು ಮಾಡಲಾಯಿತು. ಜಿಲ್ಲಾ ಮಟ್ಟದಲ್ಲಿ ಕಲೆಕ್ಟರನ ಅಧಿಕಾರವನ್ನು ಮೊಟಕುಗೊಳಿಸಲಾಯಿತು. ಅವನಿಂದ ಮೊಫ್ಯೂಸಿಲ್ ದೀವಾಣೀ ನ್ಯಾಯಾಲಯದ ಅಧಿಕಾರವನ್ನು ಕಸಿದುಕೊಂಡು ಭಾರತೀಯ ಅಧಿಕಾರಿಗಳನ್ನು 'ದಿವಾಣ' (Diwan) ಎಂಬುದಾಗಿ ನಿಯಮಿಸಲಾಯಿತು. ಪ್ರಾವಿನ್ಸಿಯಲ್ ಕೌನ್ಸಿಲ್ ಎಂಬ ಮೇಲ್ವಿಚಾರಣಾ ಸಮೀತಿಯನ್ನು ನಿಯಮಿಸಲಾಯಿತು. ಆದರಿಂದಾಗಿ ಕಲೆಕ್ಟರನ ಉಪಟಳವು ಕೆಲಮಟ್ಟಿಗೆ ಕಡಿಮೆ

ಯಾದರೂ, ಪ್ರಾವಿನ್ಸಿಯಲ್ ಕೌನ್ಸಿಲ್‌ದ ಅಧಿಕಾರಿಗಳು ಇನ್ನೂ ಹೆಚ್ಚಿನ ಪ್ರಮಾಣದ ಅತ್ಯಾಚಾರ ಅನ್ಯಾಯಗಳನ್ನು ನಡೆಯಿಸತೊಡಗಿದರು.

**4. ರೆಗ್ಯುಲೇಟಿಂಗ ಆ್ಯಕ್ಟ್, 1773 (Regulating Act, 1773)**

ಇಲ್ಲಿಯ ವರೆಗೆ ಕಂಪನಿಯ ಆಂತರಿಕ ವ್ಯವಹಾರದಲ್ಲಿ ಯಾವುದೇ ರೀತಿಯ ಆಸಕ್ತಿಯನ್ನು ತೋರದ ಬ್ರಿಟಿಶ್ ಪಾರ್ಲಿಮೆಂಟು, ತನ್ನ ಈ ಅಲಿಪ್ತ ಧೋರಣೆಯನ್ನು ಬಹುಕಾಲದ ವರೆಗೆ ಮುಂದುವರೆಯಿಸಿಕೊಂಡು ಹೋಗುವ ಪರಿಸ್ಥಿತಿಯು ಉಳಿಯಲಿಲ್ಲ. ಕಂಪನಿಯು ಭಾರತದಲ್ಲಿ ಹಲವಾರು ಆಯಕಟ್ಟಿನ ಸ್ಥಾನಗಳಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿದ ಸುದ್ದಿ ಬ್ರಿಟಿಶ್ ಸರಕಾರದ ಹಲವಾರು ಗಣ್ಯ ರಾಜಕಾರಣಿಗಳ ಗಮನವನ್ನು ಸೆಳೆಯಿತು. ಭಾರತದಿಂದ ಮರಳಿ ಕರೆಯಿಸಿಕೊಳ್ಳಲಾದ ಅನೇಕ ಬ್ರಿಟಿಶ್ ವ್ಯಾಪಾರಸ್ಥರು ಮತ್ತು ಅವರ ಕಣ್ಣು ಕುಕ್ಕುವ ಸಂಪತ್ತು ಅನೇಕರ ಬಾಯಲ್ಲಿ ನೀರೂರಿಸುವಂತಾಯಿತು. ಇದೇ ಕಾಲಕ್ಕೆ ಕಂಪನಿಯು ತನ್ನ ವ್ಯವಹಾರದಲ್ಲಿ ನಷ್ಟವನ್ನನುಭವಿಸಿದ್ದರ ಪರಿಣಾಮವಾಗಿ, ಬ್ರಿಟಿಶ್ ಸರಕಾರಕ್ಕೆ ಸಾಲ ನೀಡಲು ವಿನಂತಿಸಿಕೊಂಡಿತು. ಇದೇ ಸಮಯವನ್ನು ಸಾಧಿಸಿ ಬ್ರಿಟಿಶ್ ಸರಕಾರವು ಕಂಪನಿಯ ಕಾರ್ಯಭಾರವನ್ನು ಪರಾಮರ್ಶಿಸಲೆಂದು ಒಂದು ಕಮೀಟಿಯನ್ನು ನಿಯಮಿಸಿತು. ಅದಕ್ಕೆ ಕಂಪನಿಯು ತನ್ನ ಕಾರ್ಯ ನಡೆಯಿಸುವ ವೈಖರಿಯನ್ನು ಪತ್ತೆ ಹಚ್ಚುವ ಮತ್ತು ಬಂಗಾಲದಲ್ಲಿ ಅದರ ನ್ಯಾಯದಾನದ ಪದ್ಧತಿಯನ್ನು ಪರಾಮರ್ಶಿಸುವ ಕಾರ್ಯವನ್ನು ಒಪ್ಪಿಸಿತು. ಕಮೀಟಿಯು ತನ್ನ ವರದಿಯಲ್ಲಿ ಕಂಪನಿಯ ವ್ಯವಹಾರದ ಮೇಲೆ ವಿಶೇಷ ಬೆಳಕನ್ನು ಚೆಲ್ಲಿತಲ್ಲದೆ, ಕಂಪನಿಯು ಸಂಯೋಜನೆಯಲ್ಲಿಯ ಪ್ರಾಮುಖ್ಯವಾದ ನ್ಯೂನತೆಗಳನ್ನು ಎತ್ತಿ ತೋರಿಸಿತು. ಇದರ ಪರಿಣಾಮವಾಗಿ, 1773 ರಲ್ಲಿ ಬ್ರಿಟಿಶ್ ಪಾರ್ಲಿಮೆಂಟು ರೆಗ್ಯುಲೇಟಿಂಗ್ ಆಕ್ಟ ಎಂಬ ಕಾನೂನನ್ನು ಪಾಸುಮಾಡಿ, ಕಂಪನಿಯ ವ್ಯವಹಾರದಲ್ಲಿ ಈ ಕೆಳಗಿನ ಮಹತ್ತರವಾದ ಬದಲಾವಣೆಯನ್ನುಂಟು ಮಾಡಿತು.

**(i) ಕಂಪನಿಯ ಸಂವಿಧಾನದಲ್ಲಿ ಬದಲಾವಣೆ (Change in the constitution of the company)**

ರೆಗ್ಯುಲೇಟಿಂಗ ಆ್ಯಕ್ಟವು ಕಂಪನಿಯ ಸಂವಿಧಾನದಲ್ಲಿ ಎರಡು ಮಹತ್ವದ ಬದಲಾವಣೆಯನ್ನು ಸೂಚಿಸಿತು. ಮೊದಲನೆಯದಾಗಿ, ಕಂಪನಿಯ ನಾಲ್ಕರ ಒಂದು ಭಾಗದಷ್ಟು ಸದಸ್ಯರು ಅಂದರೆ, ಆರು ಜನ ಸದಸ್ಯರೂ ಪ್ರತಿವರ್ಷ ನಿವೃತ್ತಿಯನ್ನು ಹೊಂದಬೇಕು. ಮತ್ತು ಮತದಾನದ ಅಧಿಕಾರವು 1000 ಪೌಂಡು ಶೇರುಗಳನ್ನು ಹೊಂದಿದ ಸದಸ್ಯರಿಗೆ ಮಾತ್ರ ಸೀಮಿತವಾಗಿರಬೇಕು. ನಿರ್ದೇಶಕರ ಪದಾವಧಿಯ ಕಾಲವನ್ನು ಒಂದು ವರ್ಷದಿಂದ ನಾಲ್ಕು ವರ್ಷಕ್ಕೆ ಏರಿಸಲಾಯಿತು.

**(ii) ಕಂಪನಿಯ ಮೇಲೆ ಹೆಚ್ಚಿನ ನಿಯಂತ್ರಣ (Greater contro over the company)**

ಕಂಪನಿಯ ಆಯವ್ಯಯವನ್ನು ಕುರಿತು ಕಂಪನಿಯ ನಿರ್ದೇಶಕರು ಎಲ್ಲ ವ್ಯವಹರಣೆ ಸಂಬಂಧೀ ಕಾಗದ ಪತ್ರಗಳನ್ನು ಬ್ರಿಟಿಶ್ ಟ್ರೆಝುರಿಯಲ್ಲಿ ಸಾದರ

ಪಡಿಸಬೇಕಾದ ಅವಶ್ಯಕತೆಯುಂಟಾಯಿತು. ಇದಲ್ಲದೆ ದಿವಾಣೀ ಮತ್ತು ಮಿಲಿಟರಿ ಸಂಬಂಧದ ಭಾರತ ಸರಕಾರದೊಡನೆಯ ವ್ಯವಹರಣೆಯ ಎಲ್ಲ ಕಾಗದ ಪತ್ರಗಳನ್ನು ಬ್ರಿಟಿಶ್ ಸರಕಾರದ ಕಾರ್ಯದರ್ಶಿಯ ಮುಂದೆ ಹಾಜರ ಪಡಿಸು ವಂತೆ ನಿರ್ದೇಶಿಸಲಾಯಿತು.

### (iii) ಭಾರತದಲ್ಲಿ ಆಡಳಿತ (Administration in India)

ರೆಗ್ಯುಲೇಟಿಂಗ ಆಕ್ಟವು ಅಸ್ತಿತ್ವದಲ್ಲಿ ಬರುವದಕ್ಕಿಂಥ ಪೂರ್ವದಲ್ಲಿ ಭಾರತದ ಆಡಳಿತವು ಗವ್ಹರ್ನರ ಕೈಯಲ್ಲಿ ಕೇಂದ್ರೀಕೃತವಾಗಿತ್ತು. ಆದರೆ, ಈ ಕಾನೂನಿ ನಿಂದಾಗಿ, ಗವ್ಹರ್ನರ ಜನರಲ್ ಎಂಬ ಆಡಳಿತಾಧಿಕಾರಿಯನ್ನೂ ಮತ್ತು ನಾಲ್ಕು ಜನರನ್ನೊಳಗೊಂಡ ಒಂದು ಮಂತ್ರಾಲಯ ಸಭೆಯನ್ನೂ ಅಸ್ತಿತ್ವಕ್ಕೆ ತರಲಾಯಿತು. ಈ ಗವ್ಹರ್ನರ ಜನರಲ್‌ನು ಭಾರತದಲ್ಲಿ ಯುದ್ಧ ಮತ್ತು ಶಾಂತಿಕಾಲದಲ್ಲಿ ಎಲ್ಲ ರೀತಿಯ ನಿಯಂತ್ರಣಗಳನ್ನು ಹೊಂದಿದ್ದನು. ಅವನ ಸಮ್ಮತಿಯಿಲ್ಲದೆ, ಯಾವುದೇ ಗವ್ಹರ್ನರನು ಯುದ್ಧ ಮಾಡುವ ಮತ್ತು ಶಾಂತಿ ಒಪ್ಪಂದ ಮಾಡುವ ಹಾಗಿರಲಿಲ್ಲ. ಈ ಗವ್ಹರ್ನರ ಜನರಲ್‌ನ ನೇಮಕಾತಿಯನ್ನು ಬ್ರಿಟಿಶ್ ರಾಜನು ತನ್ನ ನಿರ್ದೇಶಕ ಮಂಡಳಿಯ ಸೂಚನೆಯ ಮೇಲೆ ಮಾಡಬಹುದಾಗಿತ್ತು. ಅವರ ಪದಾವಧಿಯ ಸಮಯವು ಐದು ವರ್ಷಕಾಲವಾಗಿತ್ತು.

### (iv) ಶಾಸನ ಅಧಿಕಾರ (Legislative authority)

ಬ್ರಿಟಿಶ್ ಸರಕಾರವು ಕಂಪನಿ ಸರಕಾರದ ನಿಯಮಗಳನ್ನು ಮಾನ್ಯ ಮಾಡುವ ತಿದ್ದುಪಡಿ ಮಾಡುವ ಅಥವಾ ಅಮಾನ್ಯಗೊಳಿಸಬಹುದಾದ ಪರಮ ಅಧಿಕಾರ ವನ್ನು ತನ್ನಲ್ಲಿ ನಿಹಿತಗೊಳಿಸಿಕೊಂಡಿತು. ಪ್ರತಿಯೊಂದು ನಿಯಮಾವಳಿಯು ರಾಜಮಂತ್ರಾಲೋಚನ ಸಭೆಯ (King in council) ಸಮ್ಮತಿ ಪಡೆದು ಕೊಳ್ಳುವ ಅವಶ್ಯಕತೆ ಇತ್ತು.

ಗವ್ಹರ್ನರ ಜನರಲ್ ಮತ್ತು ಅವನ ಮಂತ್ರಾಲೋಚನ ಸಭೆಯು ನಿಯಮಾವಳಿಗಳನ್ನು ನಿರೂಪಿಸುವ ಅಧಿಕಾರವನ್ನು ಪಡೆದುಕೊಂಡಿತು. ಈ ರೀತಿಯಾದ ನಿಯಮಾವಳಿಗಳು ತತ್ಕಾಲದ ಇಂಗ್ಲಂಡದ ನೀತಿ ನಿಯಮಾವಳಿಗಳಿ ಗಿಂಥ ವಿಭಿನ್ನ ಸ್ವರೂಪದ್ದಾಗಿರಕೂಡದೆಂಬ ನಿರ್ದೇಶನವಿತ್ತು. ಅವು ಸರ್ವೋಚ್ಚ ನ್ಯಾಯಾಲಯದಲ್ಲಿ ನೋಂದಣಿಯಾಗಿ ಪ್ರಕಟನೆಯನ್ನು ಹೊಂದಿದ ಮಾತ್ರವೇ ಕಾರ್ಯಾಚರಣೆಯಲ್ಲಿ ಬರುವಂತಾದವು.

### (v) ಕಾಣಿಕೆ ಪಡೆದುಕೊಳ್ಳುವ ಮತ್ತು ವೈಯಕ್ತಿಕ ವಾಣಿಜ್ಯ ಮಾಡುವವರ ಮೇಲೆ ನಿರ್ಬಂಧ (Prohibition against accepting presents and prevention from private trade)

ಗವ್ಹರ್ನರ ಜನರಲ್ ಆಗಲೀ, ಅವನ ಮಂತ್ರಾಲೋಚನ ಸಭೆಯ ಸದಸ್ಯ ರಾಗಲೀ, ಅಥವಾ ನ್ಯಾಯಾಧೀಶರಾಗಲೀ, ಸಾರ್ವಜನಿಕರಿಂದ ಯಾವುದೇ ರೀತಿ

ಯಾದ ಕಾಣಿಕೆಗಳನ್ನು ಪಡೆದುಕೊಳ್ಳುವ ಮತ್ತು ಕಂಪನಿಯ ವ್ಯವಹಾರವಲ್ಲದೆ ಇನ್ನಾವುದೇ ವ್ಯವಹಾರ ಮಾಡದಿರುವಂತೆ ನಿರ್ಬಂಧಿಸಲಾಯಿತು.

### (vi) ಬಂಗಾಲದ ಸರಕಾರ ರಚನೆ (Creation of Government in Bengal)

ಬಂಗಾಲ, ಬೀಹಾರ ಮತ್ತು ಓರಿಸ್ಸಾಗಳು ಬ್ರಿಟಿಶ್ ಅಧಿಪತ್ಯಕ್ಕೊಳ ಪಟ್ಟಿರಲಿಲ್ಲ. ರೆಗ್ಯುಲೇಟಿಂಗ ಆಕ್ಟನಿಂದಾಗಿ, ಈ ಪ್ರದೇಶಗಳು ಬ್ರಿಟಿಶ್ ಸರಕಾರದ ಆಧಿಪತ್ಯಕ್ಕೆ ಸೇರಿಕೊಂಡವು.

### (vii) ಸರ್ವೋಚ್ಚ ನ್ಯಾಯಾಲಯದ ಸ್ಥಾಪನೆ (Creation of Supreme Court)

1753 ರ ರಾಜ ಸನ್ನಧಿಗನುಗುಣವಾಗಿ ಅಸ್ತಿತ್ವದಲ್ಲಿ ಬಂದ ಮೇಯರ ಕೋರ್ಟುಗಳು ನ್ಯಾಯದಾನ ಕಾರ್ಯದಲ್ಲಿ ಸಮರ್ಥವಾಗಿ ಕಾರ್ಯನಿರ್ವಹಿಸುವಲ್ಲಿ ಅಸಮರ್ಥವೆಂದು ಸಿದ್ಧವಾಯಿತು. ಅಂತೆಯೇ, ಅದನ್ನು ಸರ್ವೋಚ್ಚ ನ್ಯಾಯಾಲಯದ ಪ್ರತಿಷ್ಠಾನದಿಂದ ನ್ಯೂನತೆಯನ್ನು ತುಂಬಬೇಕೆಂಬ ಇಚ್ಛೆ ಪ್ರಭಲವಾಗುತ್ತಿದ್ದಂತೆಯೇ, ರೆಗ್ಯುಲೇಟಿಂಗ್ ಆಕ್ಟವು ಬ್ರಿಟಿಶ್ ರಾಜನಿಗೆ ಕಲಕತ್ತೆಯಲ್ಲಿ ಸರ್ವೋಚ್ಚ ನ್ಯಾಯಾಲಯವನ್ನು ಸ್ಥಾಪಿಸುವ ಅಧಿಕಾರವನ್ನು ನೀಡಿತು. ಅಂತೆಯೇ, 1774 ರಲ್ಲಿ ಕಲಕತ್ತೆಯಲ್ಲಿ ಸರ್ವೋಚ್ಚ ನ್ಯಾಯಾಲಯದ ಪ್ರತಿಷ್ಠಾನವಾಯಿತು.

ಸರ್ವೋಚ್ಚ ನ್ಯಾಯಾಲಯವು ಪ್ರಮುಖ ನ್ಯಾಯಾಧೀಶನ ಅಧ್ಯಕ್ಷತೆಯಲ್ಲಿ ಇನ್ನುಳಿದ ಮೂವರು ಸಹಾಯಕ ನ್ಯಾಯಾಧೀಶರನ್ನೊಳಗೊಂಡಿತ್ತು. ಈ ನ್ಯಾಯಾಲಯದ ನ್ಯಾಯಾಧೀಶರು ಕಾನೂನು ತಜ್ಞರಾಗಿರಬೇಕಲ್ಲದೆ, ಬ್ಯಾರಿಸ್ಟರ ಪದವೀಧರರಾಗಿರಬೇಕೆಂಬ ಕಡ್ಡಾಯವಿತ್ತು ಅಲ್ಲದೆ, ಕಾನೂನು ಕ್ಷೇತ್ರದಲ್ಲಿ ಐದು ವರ್ಷಗಳ ಸೇವೆಯನ್ನು ಮಾಡಿದವರಾಗಿರಬೇಕು ಎಂಬ ಅವಶ್ಯಕತೆ ಇತ್ತು. ಈ ನ್ಯಾಯಾಲಯವು ಎಲ್ಲ ರೀತಿಯ ವ್ಯಾಜ್ಯಗಳ ನಿರ್ಣಯ ನೀಡುವ ಅರ್ಹತೆಯನ್ನು ಹೊಂದಿತ್ತು.

ಸರ್ವೋಚ್ಚ ನ್ಯಾಯಾಲಯಕ್ಕೆ ಗವ್ಹರ್ನರ ಜನರಲ್ ಆಗಲೀ ಅಥವಾ ಅವನ ಮಂತ್ರಾಲೋಚನ ಸಭೆಯ ಸದಸ್ಯರನ್ನಾಗಲೀ, ರಾಜದ್ರೋಹ ಅಪರಾಧದ ಹೊರತಾಗಿ ಇನ್ನಾವುದೇ ಅಪರಾಧಕ್ಕಾಗಿ ವಿಚಾರಿಸುವ ಅಥವಾ ದಂಡಿಸುವ ಅಧಿಕಾರವಿರಲಿಲ್ಲ. ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು, ಗವ್ಹರ್ನರ ಜನರಲ್ ಮತ್ತು ಅವನ ಮಂತ್ರಾಲೋಚನ ಸಭೆಯ ಸದಸ್ಯರನ್ನು ಈ ನ್ಯಾಯಾಲಯದ ಆಜ್ಞಾನುಸಾರವಾಗಿ ಬಂಧಿಸುವ ಅಧಿಕಾರವಿರಲಿಲ್ಲ.

ಸರ್ವೋಚ್ಚ ನ್ಯಾಯಾಲಯದ ನಿರ್ಣಯದ ವಿರುದ್ಧ ರಾಜ ಮಂತ್ರಾಲೋಚನ ಸಭೆಗೆ ಮೇಲ್ಮನವಿ ಸಲ್ಲಿಸುವ ಅವಕಾಶವನ್ನು ಈ ಕಾನೂನು ಕಲ್ಪಿಸಿತ್ತು.

**ರೆಗ್ಯುಲೇಟಿಂಗ್ ಆ್ಯಕ್ಟ್, 1773 ನ್ಯೂನತೆಗಳು (Defects in the Reulating Act, 1773)**

ರೆಗ್ಯುಲೇಟಿಂಗ ಆಕ್ಟವು ಅಸ್ತಿತ್ವಕ್ಕೆ ಬಂದ ನಂತರ ಅದರ ಹಲವಾರು ನ್ಯೂನತೆಗಳು ಬೆಳಕಿಗೆ ಬಂದವು. ಅವು ಈ ಕೆಳಗಿನಂತಿವೆ.

(i) ಬಂಗಾಲ, ಬೀಹಾರ ಮತ್ತು ದೀವಾಣಿ ಕ್ಷೇತ್ರಗಳು ಮೊಘಲ ಅಧಿಪತ್ಯಕ್ಕೊಳಪಟ್ಟ ಪ್ರದೇಶಗಳಾಗಿದ್ದು ಬ್ರಿಟಿಶ್ ಸರಕಾರದ ಅಧಿಪತ್ಯದಲ್ಲಿರಲಿಲ್ಲ. ಆದರೆ, ಸರ್ವೋಚ್ಚ ನ್ಯಾಯಾಲಯದ ಬಾಧ್ಯತಾ ಕ್ಷೇತ್ರವನ್ನು ನಿಖರವಾಗಿ ಉಲ್ಲೇಖಿಸಿರಲಿಲ್ಲವಾದರೂ, ಈ ಕೆಳಗೆ ನಮೂದಿಸಲ್ಪಟ್ಟ ಪ್ರಕಾರದ ವ್ಯಕ್ತಿಗಳಿಗೆ ಅನ್ವಯಗೊಳಿಸಲ್ಪಡಲಾಗುತ್ತಿತ್ತು.

a) ಬ್ರಿಟೀಶ್ ಪ್ರಜೆಗಳಿಗೆ,

b) ಸಾರ್ವಭೌಮ ಪ್ರಜೆಗಳಿಗೆ; ಮತ್ತು

c) ಪ್ರತ್ಯಕ್ಷವಾಗಿ ಮತ್ತು ಅಪ್ರತ್ಯಕ್ಷವಾಗಿ ಕಂಪನಿಯ ಸೇವೆಯಲ್ಲಿರುವ ವ್ಯಕ್ತಿಗಳಿಗಾಗಿ.

ಬ್ರಿಟಿಶ್ ಪ್ರಜೆ (British Subjects) ಮತ್ತು ಸಾರ್ವಭೌಮ ಪ್ರಜೆಗಳ (His Majesty Subjects) ನಡುವಿನ ಭಿನ್ನತ್ವವನ್ನು ನಿಖರವಾಗಿ ಗುರತಿಸಲಾದದ್ದರಿಂದ ಯಾರ ಕುರಿತು ಸರ್ವೋಚ್ಚ ನ್ಯಾಯಾಲಯದ ನ್ಯಾಯಿಕ ಕ್ಷೇತ್ರವು ಅನ್ವಯಿಸಲ್ಪಡುತ್ತದೆಂಬ ಬಗ್ಗೆ ಭಿನ್ನ ಭಿನ್ನವಾದ ಅಭಿಪ್ರಾಯಗಳು ವ್ಯಕ್ತಪಡಿಸಲಾರಂಬಿಸಿದವು.

(ii) ಕಂಪನಿಯು ದೀವಾಣೀ ಎಂಬ ಅಧಿಕಾರ ವ್ಯಾಪ್ತಿಯಲ್ಲಿ ಸರ್ವೋಚ್ಚ ನ್ಯಾಯಾಲಯದ ವ್ಯಾಪ್ತಿಯಲ್ಲಿ ಬರುವುದೇ ಎಂಬ ಬಗ್ಗೆ ಸರಿಯಾಗಿ ನಮೂದಿಸಿರಲಿಲ್ಲ. ಅಂತೆಯೇ, ಕಂಪನಿಯ ಕೃತ್ಯಗಳ ಕುರಿತಾದ ಬಾಧ್ಯತೆಗೆ ಸಂಬಂಧಿಸಿದ್ದನ್ನು ಸರ್ವೋಚ್ಚ ನ್ಯಾಯಾಲಯದ ನಿರ್ಣಯಕ್ಕೆ ಒಳಪಡಿಸಬಹುದೇ ? ಎಂಬುದು ನಿಗದಿತವಾಗಿ ನಮೂದಿಸಲಾಗಿಲ್ಲ.

(iii) ಸರ್ವೋಚ್ಚ ನ್ಯಾಯಾಲಯವು ಯಾವ ಕಾನೂನುಬದ್ಧವಾಗಿ ನ್ಯಾಯ ನಿರ್ಣಯ ನೀಡಬೇಕೆಂಬ ಬಗ್ಗೆ ರೆಗ್ಯುಲೇಟಿಂಗ್ ಆಕ್ಟದಲ್ಲಿ ಯಾವುದೇ ನಿಯಮವನ್ನು ಸೇರಿಸಲಿಲ್ಲವಾದ್ದರಿಂದ, ಸರ್ವೋಚ್ಚ ನ್ಯಾಯಾಲಯವು ಇಂಗ್ಲೀಷ ಪದ್ಧತಿಗನುಸಾರವಾಗಿ ನ್ಯಾಯ ನಿರ್ಣಯ ನೀಡತೊಡಗಿದ್ದರಿಂದ ಗೊಂದಲಮಯ ಪರಿಸ್ಥಿತಿಯುಂಟಾಯಿತು. ಮೇಯರ್ಸ್ ಕೋರ್ಟದ ಉತ್ತರಾಧಿಕಾರತ್ವವನ್ನು ಹೊಂದಿದ ಸರ್ವೋಚ್ಚ ನ್ಯಾಯಾಲಯವು ಇಂಗ್ಲೀಷ ಕಾನೂನಿಗನುಸಾರವಾಗಿ ನ್ಯಾಯ ನಿರ್ಣಯ ಮಾಡಬೇಕೆಂಬುದು ಒಂದು ವಾದವಾದರೆ, ಅದು ಕೇವಲ ಇಂಗ್ಲೀಷ ಕಾನೂನನ್ನು ಮಾತ್ರ ಅನುಸರಿಸದೆ ಭಾರತೀಯ ಪರಿಸರಕ್ಕೆ ಸರಿಹೊಂದುವ ಇಂಗ್ಲೀಷ ನಿಯಮಗಳನ್ನು ಮಾತ್ರ ಅನುಸರಿಸಬೇಕೆಂಬುದು ಇನ್ನೊಂದು ವಾದಸರಣಿಯಾಗಿತ್ತು. ಅಂತೆಯೇ, ಸರ್ವೋಚ್ಚ ನ್ಯಾಯಾಲಯವು

ಯಾವ ಕಾನೂನು ಅನುಸರಿಸಿ ನ್ಯಾಯ ನಿರ್ಣಯ ನೀಡುತ್ತದೆಂಬ ಬಗ್ಗೆ ಯಾರಿಗೂ ಖಚಿತವಾದ ತಿಳುವಳಿಕೆ ಇರಲಿಲ್ಲ.

ರೆಗ್ಯುಲೇಟಿಂಗ ಆಕ್ಟದಿಂದ ಉದ್ಭವಿಸಿದ ಗೊಂದಲಮಯ ವಾತಾವರಣ ಸರ್ವೋಚ್ಚ ನ್ಯಾಯಾಲಯದ ವ್ಯತಿರಿಕ್ತ ನ್ಯಾಯದಾನದ ಪದ್ಧತಿಯ ನಿದರ್ಶನವಾಗಿ ನಂದಕುಮಾರ ವಿಚಾರಣೆ Nandakumar's trial) ಪ್ರಕರಣವನ್ನು ಉಲ್ಲೇಖಿಸಬಹುದಾಗಿದೆ. ಈ ಪ್ರಕರಣದ ವಸ್ತುಸ್ಥಿತಿಯು ಈ ಕೆಳಗಿನಂತಿದೆ—

ರಾಜಾ ನಂಧಕುಮಾರ ಎಂಬಾತನು ಬಂಗಾಲದ ನಿವಾಸಿಯಾಗಿದ್ದು ಅತ್ಯಂತ ಪ್ರಭಾವೀ ವ್ಯಕ್ತಿತ್ವವನ್ನು ಹೊಂದಿದವನಾಗಿದ್ದನು. ಅವನು, ಆಗಿನ ಗವ್ಹರ್ನರ ಜನರಲ್‌ನಾದ ವಾರೆನ್ ಹೇಸ್ಟಿಂಗ್ಸ್‌ನ ವಿರುದ್ಧ ಕೆಲವೊಂದು ಲಂಚ ರುಷುವತ್ತು ಕುರಿತು ದೋಷಾರೋಪಣೆಯನ್ನು ಮಾಡಿದ್ದನು. ಅಲ್ಲದೆ ಅದನ್ನು ಸಿದ್ಧಮಾಡಿ ತೋರಿಸುವಲ್ಲಿ ಸಫಲನೂ ಆಗಿದ್ದನು. ಇದರಿಂದಾಗಿ ಅವಮಾನಿತನಾದ ಗವರ್ನರ ಜನರಲ್ಲನು ನಂದಕುಮಾರನಿಗೆ ಕೆಡಕನ್ನುಂಟು ಮಾಡುವ ಸಲುವಾಗಿ ಸಮಯ ಕಾಯುತ್ತಲಿದ್ದನು.

ಇದಾದ ಕೆಲ ದಿನಗಳ ನಂತರ ನಂದಕುಮಾರನನ್ನು ಫೇಕ್ಸ್ ಮತ್ತು ರಾಧಾ ಚರಣ ಎಂಬವರ ಜೊತೆಗೆ ಸಂಚುಹೂಡಿದ ಅಪರಾಧಕ್ಕಾಗಿ ಬಂಧಿಸಲಾಯಿತು. ಈ ಬಂದನಕ್ಕೆ ಪ್ರಮುಖ ಪ್ರೇರಣೆ ಗವ್ಹರ್ನರ ಜನರಲ್ ವಾರೆನ್ ಹೇಸ್ಟಿಂಗ್ಸ್ ಮತ್ತು ಅವನ ಮಂತ್ರಾಲೋಚನ ಸಭೆಯ ಒಬ್ಬ ಸದಸ್ಯನಾದ ಬುರವೆಲ್ ಎಂಬಾತನು ಆಗಿದ್ದರು. ಇದೇ ಸಮಯವನ್ನು ಸಾಧಿಸಿ, ವಾರೆನ್ ಹೇಸ್ಟಿಂಗ್ಸ್‌ನು ನಂದ ಕುಮಾರನ ವಿರುದ್ಧ ಮೋಹನ ಪ್ರಸಾದ ಎಂಬಾತನಿಂದ ದಾಖಲೆ ಪತ್ರದಲ್ಲಿ ತಿದ್ದುಪಡಿ ಮಾಡಿದ ಅಪರಾಧ (forgery) ಕ್ಕಾಗಿ ಬೇರೊಂದು ಪ್ರಕರಣವನ್ನು ದಾಖಲ ಮಾಡಿಸಿದನು. ಮೊದಲಿನ ದಾವೆಯ ವಿಚಾರಣೆಯಲ್ಲಿ ಇನ್ನುಳಿದ ಅಪರಾಧಿಗಳಿಗೆ ದಂಡನೆಯನ್ನು ವಿಧಿಸಿ ಬಿಡುಗಡೆ ಮಾಡಿದ್ದಾದರೆ ನಂದಕುಮಾರನ ವಿರುದ್ಧ ಬೇರೊಂದು ದಾವೆಯು ಇರುವ ಕಾರಣವನ್ನು ಮುಂದೆ ಮಾಡಿ ಪರಿಣಾಮವನ್ನು ಸ್ಥಗಿತಗೊಳಿಸಲಾಯಿತು. ನಂದಕುಮಾರನನ್ನು ಹನ್ನೆರಡು ಜ್ಯೂರಿಗಳ ಸಹಾಯದಿಂದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶನಾದ ಲಾರ್ಡ ಇಂಪೆ ಎಂಬಾತನು ವಿಚಾರಣೆಯನ್ನು ನಡೆಯಿಸಿ, ನಂದ ಕುಮಾರನನ್ನು ದೋಷಿ ಎಂದು ನಿರ್ಣಯಿಸಿ, ಬ್ರಿಟಿಶ್ ಪಾರ್ಲಿಮೆಂಟ ಆ್ಯಕ್ಟ, 1728 ಕ್ಕನುಗುಣವಾಗಿ ಮರಣ ದಂಡನೆಯನ್ನು ವಿಧಿಸಲಾಯಿತು. 5 ನೇ ಅಗಸ್ಟ 1775 ರಂದು ನಂದಕುಮಾರನನ್ನು ಗಲ್ಲಿಗೇರಿಸಲಾಯಿತು.

ಅನೇಕ ಇತಿಹಾಸಕಾರರು, ತತ್ಕಾಲಿಕ ಬ್ರಿಟಿಶ್ ಬುದ್ಧಿಜೀವಿಗಳು ಸರ್ವೋಚ್ಚ ನ್ಯಾಯಾಲಯದ ಈ ನಿರ್ಣಯವನ್ನು ಖಂಡ ತುಂಡವಾಗಿ ಖಂಡಿಸಿದರು. ಬ್ರಿಟಿಶ್ ಪಾರ್ಲಿಮೆಂಟಿನ ಕಾಯ್ದೆಯು ಬ್ರಿಟಿಶ್ ಪರಿಸರಕ್ಕೆ ಹೊಂದುವಂತೆ ಮಾಡ

ಲ್ಪಟ್ಟಿದ್ದಾಗ್ಗಿ, ಭಾರತೀಯ ಪರಿಸರಕ್ಕೆ ಅನ್ವಯಕಾರಿಯಾಗಿರಲಿಲ್ಲ. ಆದರೂ ಗವರ್ನರ ಜನರಲ್‌ನ ವೈಯಕ್ತಿಕದ್ವೇಷ ಸಾಧನೆಗಾಗಿ, ಸರ್ವೋಚ್ಚ ನ್ಯಾಯಾಲಯವು ಅಸ್ತಿತ್ವಕ್ಕೆ ಬರುವ ಅನೇಕ ವರ್ಷಗಳ ಮೊದಲು ಪಾಸು ಮಾಡಲ್ಪಟ್ಟ ಒಂದು ಕಾನೂನಿನ ಆಧಾರದ ಮೇಲೆ ನಿರಪರಾಧಿಯಾದ ಭಾರತೀಯನ ಬಲಿದಾನ ನೀಡಲಾಯಿತು. ಸರ್ವೋಚ್ಚ ನ್ಯಾಯಾಲಯದ ಪ್ರಾಧಿಕಾರದಲ್ಲಿ ಈ ಪ್ರಕರಣವು ಬಾರದಿದ್ದರೂ. ಬಲವಂತವಾಗಿ ಎಳೆದು ತರಲಾಯಿತು. ರಾಜ ಮಂತ್ರಾಲೋಚನ ಸಭೆಗೆ ಸಲ್ಲಿಸಬಯಸಿದ, ಕ್ಷಮಾದಾನ ಅರ್ಜಿಯನ್ನೂ ಸಹ ತಳ್ಳಿಹಾಕಿದ ಸರ್ವೋಚ್ಚ ನ್ಯಾಯಾಲಯದ ಕಾರ್ಯವೈಖರಿ. ಅತ್ಯಂತ ಖಂಡನೀಯ. ರಾಜಕೀಯ ದ್ವೇಷ ಸಾಧನೆಗಾಗಿ, ನ್ಯಾಯಾಂಗದ ಅನಪೇಕ್ಷಿತ ಉಪಯೋಗ ಅತ್ಯಂತ ಹೀನಾಯಕಾರಿ ಕೃತ್ಯ.

ನಂದಕುಮಾರನಿಗೆ ವಿಧಿಸಿದ ಶಿಕ್ಷೆಯಿಂದಾಗಿ. ಬ್ರಿಟಿಶ್ ಕಾನೂನನ್ನು ಭಾರತೀಯ ಪರಿಸರಕ್ಕೆ ಅನ್ವಯಿಸುವುದರಿಂದಾಗುವ ಭೀಕರ ಪರಿಣಾಮವು ವ್ಯಕ್ತವಾಯಿತು.

## 5. ಲಾರ್ಡ ಕಾರ್ನವಾಲೀಸನ ನ್ಯಾಯಿಕ ಸುಧಾರಣೆಗಳು (Judicial Reforms by Lard Carnwallis)

ವಾರೆನ್ ಹೇಸ್ಟಿಂಗ್ಸ್‌ನ ನಂತರ 1786 ರಲ್ಲಿ ಗವರ್ನರ ಜನರಲ್ ಆಗಿ ಬಂದ ಲಾರ್ಡ ಕಾರ್ನವಾಲೀಸನು ಬ್ರಿಟಿಶ್ ಭಾರತದಲ್ಲಿ ಅನೇಕ ಆರ್ಥಿಕ, ನಾಯಿಕ ಮತ್ತು ಆಡಳಿತಾತ್ಮಕ ಸುಧಾರಣೆಗಳನ್ನು ಮಾಡಿದನು. ಅವನ ಸುಧಾರಣೆಯ ಕಾರ್ಯವನ್ನು ಮೂರು ಘಟ್ಟಗಳಲ್ಲಿ ಗುರುತಿಸಬಹುದಾಗಿದೆ.

i) 1787 ರ ಸುಧಾರಣಾ ಪದ್ಧತಿ ರೂಪುರೇಷೆ
ii) 1790 ರ ಸುಧಾರಣಾ ಪದ್ಧತಿ ರೂಪುರೇಷೆ
iii) 1793 ರ ಸುಧಾರಣಾ ಪದ್ಧತಿ ರೂಪುರೇಷೆ.

### (i) 1787 ರ ಸುಧಾರಣಾ ಪದ್ಧತಿ ರೂಪುರೇಷೆ (The Scheme of improvement of 1787)

ವಾರೆನ್ ಹೇಸ್ಟಿಂಗ್ಸ್‌ನ ನ್ಯಾಯಿಕ ಮತ್ತು ಆಡಳಿತಾತ್ಮಕ ಅಧಿಕಾರಗಳ ವಿಕೇಂದ್ರೀಕರಣವು ಹೇಗೋ ಕಂಪನಿಯ ಹಿರಿಯ ಅಧಿಕಾರಿಗಳ ಮನಸ್ಸನ್ನು ಹಿಡಿಸಲಿಲ್ಲ. ಅವರ ಅಭಿಪ್ರಾಯದಲ್ಲಿ ಕಂದಾಯ (Revenue) ಮತ್ತು ನ್ಯಾಯಿಕ ಕಾರ್ಯಗಳು ಒಬ್ಬನೇ ವ್ಯಕ್ತಿಯಲ್ಲಿ ಕೇಂದ್ರೀಕೃತವಾಗಿರುವುದರಿಂದ ಆಡಳಿತ ಕಾರ್ಯವು ಹೆಚ್ಚಿನ ದಕ್ಷತೆಯಿಂದ ನಡೆಸಲ್ಪಡುವುದಾಗಿತ್ತು. ಅಂತೆಯೇ, ಇಂಗ್ಲಂಡದಲ್ಲಿ ನಿರ್ದೇಶಕ ಮಂಡಳಿಯ ಸದಸ್ಯರು ಕಂಪನಿಯ ಈ ಹಿರಿಯ ಅಧಿಕಾರಿಗಳ ಒತ್ತಡಕ್ಕೆ ಮಣಿದು, ಲಾರ್ಡ ಕಾರ್ನವಾಲೀಸನನ್ನು ಕಂದಾಯ ಮತ್ತು ನ್ಯಾಯಿಕ ಕಾರ್ಯಗಳನ್ನು ಕೇಂದ್ರಿಕರಿಸುವಂತೆ ನಿರ್ದೇಶಿಸಿದರು. ಇದನ್ನು ಕಾರ್ಯರೂಪಕ್ಕಿಳಿಸಲು, ಅವನು ಜಿಲ್ಲೆಯ ಕಲೆಕ್ಟರನನ್ನೂ ಆಯಾ ಜಿಲ್ಲೆಯ ಕಂದಾಯ ವಸೂಲಿಗಾಗಿಯೂ

ಮತ್ತು ಅದರಿಂದಾಗಿ ಉದ್ಭವಿಸಬಹುದಾದ ಪ್ರಕರಣಗಳನ್ನು ಇತ್ಯರ್ಥಗೊಳಿಸಲು ಅವನನ್ನು ಈ ನ್ಯಾಯಾಲಯದ ನ್ಯಾಯಾಧೀಶನನ್ನಾಗಿಯೂ ನಿಯಮಿಸಲಾಯಿತು.

ಕಂದಾಯ ವಸೂಲಿನಿಂದ ಉದ್ಭವಿಸಬಹುದಾದ ಪ್ರಕರಣಗಳ ನಿರ್ಣಯ ನೀಡುವ ಈ ನ್ಯಾಯಾಲಯಕ್ಕೆ **ಮಾಲ ಅದಾಲತ** (Mal Adalat) ಎಂದು ಕರೆಯಲಾಯಿತು. ಇದರ ನ್ಯಾಯಾಧೀಶನು ಕಲೆಕ್ಟರ ಆಗಿದ್ದನು. ಅವನ ನಿರ್ಣಯದ ವಿರುದ್ಧ ಮೊದಲನೇಯ ಮೇಲ್ಮನವಿಯನ್ನು ಕಲಕತ್ತೆಯಲ್ಲಿರುವ ಕಂಧಾಯ ವಸೂಲಿ ಮಂಡಳಿ (Board of Revenue) ಗೂ ಮತ್ತು ಆ ನಂತರದಲ್ಲಿ ಗವ್ಹರ್ನರ ಜನರಲ್ ಮಂತ್ರಾಲೋಚನ ಸಭೆಗೂ ಮಾಡ ಬಹುದಾಗಿತ್ತು.

ದೀವಾಣೀ ಪ್ರಕರಣಗಳನ್ನು ಇತ್ಯರ್ಥಗೊಳಿಸಲು **ಮೊಫ್ಯೂಸಿಲ್ ದೀವಾಣೀ ಅದಾಲತ** (Mofussil Diwani Adalat) ಗಳನ್ನು ಸ್ಥಾಪಿಸಲಾಯಿತು. ಇದರ ನ್ಯಾಯಾಧೀಶನೂ ಕಲೆಕ್ಟರನೇ ಆಗಿದ್ದನು. ಈ ನ್ಯಾಯಾಲಯದಲ್ಲಿ ಅವನು ಕೇವಲ ದೀವಾಣೀ ಪ್ರಕರಣಗಳನ್ನು ಮಾತ್ರ ಇತ್ಯರ್ಥ ಗೊಳಿಸುವವನಾಗಿದ್ದನು. ಅವನ ನಿರ್ಣಯದ ವಿರುದ್ಧ ಸದರ ದೀವಾಣೀ ಅದಾಲತದ ಮುಂದೆ ಮೇಲ್ಮನವಿಯನ್ನು ಸಲ್ಲಿಸಬೇಕಾಗುತ್ತಿತ್ತು. ಆದರೆ, ವ್ಯಾಜ್ಯ ಕಾರಣವಾದ ಹಣದ ಮೊತ್ತವು 1000 ರೂಪಾಯಿಗಳಿಗಿಂತ ಹೆಚ್ಚಿನ ಮೌಲ್ಯ ದ್ದಾಗಿರುವ ಅವಶ್ಯಕತೆ ಇತ್ತು. ಮೇಲ್ಮನವಿ ಕಾರಣವಾದ ವ್ಯಾಜ್ಯದ ಮೊತ್ತವು 5000 ಪೌಂಡುಗಳಿಗಿಂಥ ಹೆಚ್ಚಿನದ್ದಾಗಿದ್ದರೆ, ರಾಜ ಮಂತ್ರಾಲೋಚನ ಸಭೆಗೆ ಮೇಲ್ಮನವಿ ಸಲ್ಲಿಸುವ ಅವಕಾಶವಿತ್ತು. ಸದರ ದೀವಾಣೀ ಅದಾಲತವು ಗವ್ಹರ್ನರ ಜನರಲ್ ಮತ್ತು ಇನ್ನಿತರ ಸದಸ್ಯರನ್ನೊಳಗೊಂಡಿತ್ತು. ಮುಖ್ಯ ಖಾಝಿ, ಮುಖ್ಯ ಮುಫ್ತಿ ಅಲ್ಲದೆ ಇಬ್ಬರು ಮೌಲ್ವಿಗಳು ಮತ್ತು ಹಿಂದೂ ಪಂಡೀತರನ್ನೊಳ ಗೊಂಡಿತ್ತು.

ಕ್ರಿಮಿನಲ್ ಪ್ರಕರಣಗಳನ್ನು ಇತ್ಯರ್ಥಗೊಳಿಸಲು ಮೊಫ್ಯೂಸಿಲ್ ನಿಝಾಮತ ಅದಾಲತಗಳನ್ನು (Moffussil Nizamat Adalat) ಸ್ಥಾಪಿಸಲಾಯಿತು. ಅದರ ಮ್ಯಾಜಿಸ್ಟ್ರೇಟರನ್ನೂ ಸಹ ಕಲೆಕ್ಟರನೇ ಆಗಿದ್ದನು. ಸಣ್ಣ ಪುಟ್ಟ ಅಪರಾಧ ಗಳಿಗಾಗಿ ವಿಚಾರಿಸಿ ಅವರನ್ನು ದಂಡಿಸುವ ಅಧಿಕಾರವು ಅವನಿಗಿತ್ತು. 15 ದಿನಗಳ ವರೆಗೆ ಸೆರೆಮನೆವಾಸ ವಿಧಿಸುವ ಅಥವಾ 15 ಬೆತ್ತದ ಹೊಡೆತಗಳನ್ನು ಕೊಟ್ಟು ದಂಡಿಸುವ ಅಧಿಕಾರವು ಅವನಿಗಿತ್ತು. ತೀವ್ರತರ ಅಪರಾಧ ಕುರಿತು ಅವುಗಳನ್ನು ಮೊಫ್ಯೂಸಿಲ್ ಫೌಜದಾರೀ ಅದಾಲತಕ್ಕೆ ವಿಚಾರಣೆಗಾಗಿ ಕಳಿಸಿಕೊಡುವ ಅಧಿಕಾರ ವಿತ್ತು. ಇದಲ್ಲದೆ, ಕಲೆಕ್ಟರನು ಬ್ರಿಟಿಶ್ ನಾಗರಿಕರು ಅಪರಾಧ ಮಾಡಿದ್ದಾದರೆ, ಅವರನ್ನು ಸೆರೆಹಿಡಿದು ಕಲಕತ್ತೆಯಲ್ಲಿರುವ ಸರ್ವೋಚ್ಚ ನ್ಯಾಯಾಲಯಕ್ಕೆ ವಿಚಾ ರಣೆಗಾಗಿ ಕಳಿಸಿಕೊಡುವ ಅಧಿಕಾರವನ್ನು ನೀಡಲಾಗಿತ್ತು.

## (ii) 1790 ರ ಸುಧಾರಣಾ ರೂಪುರೇಷೆ ( The Scheme of improvement of 1790 )

1790 ರ ಸುಧಾರಣಾ ಘಟ್ಟದಲ್ಲಿ ಕಾರ್ನವಾಲೀಸನು ಬಹು ಪ್ರಮಾಣದಲ್ಲಿ ಕ್ರಿಮಿನಲ್ ನ್ಯಾಯದಾನದಲ್ಲಿ ಸುಧಾರಣೆಯನ್ನು ಮಾಡುವಲ್ಲಿ ಶ್ರಮಿಸಿದನು. ಯಾಕೆಂದರೆ, ಆ ಸಮಯದಲ್ಲಿ ಕ್ರಿಮಿನಲ್ ನ್ಯಾಯದಾನ ಪದ್ಧತಿಯು ಅಷ್ಟೊಂದು ಸಮರ್ಪಕವಾಗಿರಲಿಲ್ಲ. ಮೊಫ್ಯೂಸಿಲ್ ಫೌಜದಾರಿ ಅದಾಲತಗಳು ಮುಸ್ಲೀಮ ಕಾನೂನು ತಜ್ಞರಾದ ಖಾಜಿ, ಮುಫ್ತೀ ಮತ್ತು ಮೌಲ್ವಿಗಳನ್ನೊಳಗೊಂಡಿದ್ದರೆ, ಮುರ್ಶಿದಾಬಾದದಲ್ಲಿ ಸ್ಥಾಪಿತಗೊಂಡ ಸದರ ನಿಝಾಮತ ಅದಾಲತವು ನವಾಬರ ಅಧ್ಯಕ್ಷತೆಯಲ್ಲಿ ಕಾರ್ಯ ನಿರ್ವಹಿಸುತ್ತಲಿತ್ತು. ಅವನು ತನಗಿಷ್ಟ ಬಂದ ರೀತಿಯಲ್ಲಿ ನ್ಯಾಯಾಧೀಶರ ನೇಮಕಾತಿಯನ್ನು ಮಾಡುತ್ತಿದ್ದನಲ್ಲದೆ ಅವರಿಗೆ ತಮ್ಮ ಹುದ್ದೆಯ ಸೇವಾ ಭದ್ರತೆ ಇರಲಿಲ್ಲ. ನವಾಬರ ಇಚ್ಛಾನುಸಾರವಾಗಿ ಅವರನ್ನು ಪದಚ್ಯುತ ಗೊಳಿಸಲಾಗುತ್ತಿತ್ತು. ಅವರಿಗೆ ಅತೀ ಕಡಿಮೆ ಮೊತ್ತದ ಸಂಭಾವನೆಯನ್ನು ನೀಡಲಾಗುತ್ತಿದ್ದರಿಂದ, ಅವರು ಅನೀತಿ ಭ್ರಷ್ಟಾಚಾರ ಮಾರ್ಗವನ್ನು ಅನುಸರಿಸು ತ್ತಿದ್ದರು. ನ್ಯಾಯದಾನ ಪದ್ಧತಿಯಲ್ಲಿ ಅತಿಯಾದ ವಿಳಂಬವು ಜನರಲ್ಲಿ ಅಸಂತೋಷವನ್ನುಂಟುಮಾಡಿತ್ತು. ಶಿಕ್ಷೆ, ದಂಡನೆಗಳು ಯಾವ ಇತಿಮಿತಿ ಇಲ್ಲದೆ, ನ್ಯಾಯಾಧೀಶರ ಸ್ವ ಇಚ್ಛೆಗನುಸಾರವಾಗಿ ಚಲಾಯಿಸಲ್ಪಡುತ್ತಿದ್ದವು. ಕಾರ್ನ ವಾಲೀಸನು ಇಡೀ ಕ್ರಿಮಿನಲ್ ನ್ಯಾಯದಾನದಲ್ಲಿ ಸುಧಾರಣೆಯನ್ನು ತರುವಲ್ಲಿ ಈ ಕೆಳಗಿನ ಬದಲಾವಣೆಯನ್ನು ಜಾರಿಯಲ್ಲಿ ತಂದನು.

ಸದರ ನಿಝಾಮತ ಅದಾಲತನ್ನು ಕಲ್ಕತ್ತೆಗೆ ವರ್ಗಾಯಿಸಿದನು. ಅದ ರಿಂದಾಗಿ ನವಾಬನ ಅದರ ಮೇಲಿನ ನಿಯಂತ್ರಣವು ತಪ್ಪಿಹೋಯಿತು. ಸದರ ನಿಝಾಮತ ಅದಾಲತವು ಗವ್ಹರ್ನರ ಜನರಲ್ ಮತ್ತು ಅವನ ಮಂತ್ರಾಲೋಚನ ಸಭೆಯನ್ನೊಳಗೊಂಡು ಮುಸ್ಲೀಮ ಕಾನೂನು ತಜ್ಞರ ನೆರವನ್ನು ಪಡೆಯಲಾ ರಂಭಿಸಿತು. ಈ ನ್ಯಾಯಾಲಯವು ವಾರಕ್ಕೊಂದಾವರ್ತಿ ಸಭೆ ಸೇರುತ್ತಲಿತ್ತು.

ಮೊಫ್ಯೂಸಿಲ್ ಫೌಜದಾರಿ ಅದಾಲತಗಳನ್ನು ರದ್ದುಪಡಿಸಲಾಯಿತು. ಅವುಗಳ ಸ್ಥಾನದಲ್ಲಿ ನಾಲ್ಕುವಲಯ ನ್ಯಾಯಾಲಯಗಳನ್ನು (Courts of Circuits) ಪಾಟ್ನಾ, ಕಲಕತ್ತಾ, ಮುರ್ಶಿದಾಬಾದ ಮತ್ತು ಡಾಕ್ಕಾಗಳಲ್ಲಿ ಸ್ಥಾಪಿಸಲಾಯಿತು. ಯಾವುದೇ ಅಪರಾಧಿಯನ್ನು ಬಂಧಿಸಿ ಕಲೆಕ್ಟರನು ಈ ವಲಯ ನ್ಯಾಯಾಲಯದ ಮುಂದೆ ಹಾಜರ ಪಡಿಸಬೇಕಾಗುತ್ತಿತ್ತು. ಚಿಕ್ಕಪುಟ್ಟ ಅಪರಾಧಗಳನ್ನು ವಿಚಾರಿಸುವ ಅಧಿಕಾರವು ಈ ವಲಯ ನ್ಯಾಯಾಲಯಗಳಿಗಿದ್ದರೆ, ಹೀನಾಯ ಅಪರಾಧಗಳನ್ನು ವಿಚಾರಿಸಲು ಅಪರಾಧಿಗಳನ್ನು ಸದರ ನಿಝಾಮತ ಅದಾಲತಕ್ಕೆ ಕಳಿಸಬೇಕಾಗುತ್ತಿತ್ತು.

ಮೊಟ್ಟ ಮೊದಲಬಾರಿಗೆ ಯುರೋಪಿಯನ್ ಬ್ರಿಟಿಶ್ ನಾಗರಿಕರನ್ನು ಈ ನ್ಯಾಯಾಲಯಗಳ ಪ್ರಾಧಿಕಾರಕ್ಕೊಳಪಡಿಸಲಾಯಿತು. ಕ್ರಿಮಿನಲ್ ನ್ಯಾಯದಾನ

ಕಾರ್ಯದಲ್ಲಿ ಸೇವೆ ಸಲ್ಲಿಸುವ ಎಲ್ಲ ಅಧಿಕಾರಿಗಳಿಗೆ ಕಾರ್ನವಾಲೀಸನು ಅತೀ ಉತ್ತಮ ವಾದ ವೇತನವನ್ನು ನಿಗದಿಗೊಳಿಸಿದನು. ಇದರಿಂದಾಗಿ ಭ್ರಷ್ಟಾಚಾರವು ಸಾಕಷ್ಟು ಪ್ರಮಾಣದಲ್ಲಿ ಕಡಿಮೆಯಾಯಿತು.

ಕಾರ್ನವಾಲೀಸನ ಈ ಸುಧಾರಣೆಯು ಕ್ರಿಮಿನಲ್ ನ್ಯಾಯದಾನದಲ್ಲಿ ಸಾಕಷ್ಟು ಸುಧಾರಣೆಯನ್ನುಂಟು ಮಾಡಿತು ಆದರೆ, ವಲಯ ನ್ಯಾಯಾಲಯಕ್ಕೆ ಹೋಗಿ ಬರುವ ವಿಲಂಬನೆಯಿಂದಾಗಿ ಕೈದಿಗಳು ಹೆಚ್ಚುವರಿ ಸಮಯದ ವರೆಗೆ ಬಂಧನದಲ್ಲಿ ಉಳಿಯುವಂತಾಯಿತು. ಇದೊಂದು ಗಮನಾರ್ಹ ನ್ಯೂನತೆಯಾಗಿತ್ತು.

### (iii) 1793 ರ ಸುಧಾರಣಾ ಪದ್ಧತಿ ರೂಪುರೇಷೆ (The Scheme of improvement of 1793)

1787 ರ ಸುಧಾರಣಾ ಪದ್ಧತಿಯ ಅಂಗವಾಗಿ ನ್ಯಾಯಿಕ ಮತ್ತು ಕಂದಾಯ ವಸೂಲಿ ಆಡಳಿತವನ್ನು ಜಿಲ್ಲಾ ಕಲೆಕ್ಟರನಲ್ಲಿ ಒಂದುಗೂಡಿಸುವಿಕೆಯಿಂದಾಗಿ ಅವನು ಅತ್ಯಂತ ಪ್ರಭಲ ವ್ಯಕ್ತಿಯಾಗಿ ಮಾರ್ಪಾಡ ಹೊಂದಿದನು. ಅನಿಯಂತ್ರಿತ ಅಧಿ ಕಾರವು ಅಧಿಕಾರಿಯನ್ನು ಭ್ರಷ್ಟಗೊಳಿಸುತ್ತದೆ (Absolute power corrupts) ಎಂಬ ಹಾಗೆ ಜಿಲ್ಲಾ ಕಲೆಕ್ಟರನು ತನ್ನ ಅಧಿಕಾರದ ದುರುಪಯೋಗ ಪಡಿಸಿಕೊಳ್ಳಲಾರಂಭಿಸಿದನು. ಇದನ್ನು ತೊಡೆದುಹಾಕುವುದಕ್ಕಾಗಿ, 1793 ರ ಸುಧಾರಣಾ ಪದ್ಧತಿಯಲ್ಲಿ ಕಾರ್ನವಾಲೀಸನು ಮಾಲ ಅದಾಲತಗಳನ್ನು ನಿರ್ಮೂಲನೆಗೊಳಿಸಿದನು ಮತ್ತು ಈ ನ್ಯಾಯಾಲಯದ ಅಧಿಕಾರವನ್ನು ಮೊಫ್ಯೂಸಿಲ್ ದೀವಾಣೀ ಅದಾಲತಕ್ಕೆ ವರ್ಗಾಯಿಸಲಾಯಿತು. ಕಲೆಕ್ಟರನಿಗೆ ಕೇವಲ ಕಂದಾಯ ವಸೂಲಿಯನ್ನು ಮಾತ್ರ ನೋಡಿಕೊಳ್ಳುವಂತೆ ನಿರ್ದೇಶಿಸ ಲಾಯಿತು. ನ್ಯಾಯದಾನವನ್ನು ಕೇವಲ ದೀವಾಣೀ ಅದಾಲತಗಳು ಮಾತ್ರ ನೋಡಿಕೊಳ್ಳುವಂತಾಯಿತು. ಇದರಿಂದಾಗಿ, ಆಡಳಿತಾಧಿಕಾರಿಯ ಅಧಿಕಾರ ದುರುಪಯೋಗದಿಂದ ತೊಂದರೆಗೊಳಗಾದ ವ್ಯಕ್ತಿಯು ದೀವಾಣೀ ಅದಾಲತಕ್ಕೆ ಮನವಿಯನ್ನು ಸಲ್ಲಿಸಬಹುದಾದ ಅರ್ಹತೆಯನ್ನು ಪಡೆದುಕೊಂಡಿದ್ದನು. ಇದ ರಿಂದಾಗಿ, ಬಂಗಾಲ ಬೀಹಾರ ಮತ್ತು ಓರಿಸ್ಸಾಗಳಲ್ಲಿ ಕಾನೂನು ಆಳ್ವಿಕೆಯು ನೆಲೆ ಗೊಂಡಂತಾಯಿತು.

1793 ರ ಸುಧಾರಣಾ ಪದ್ಧತಿಯು ದೀವಾಣೀ ನ್ಯಾಯದಾನದಲ್ಲಿ ಸಾಕಷ್ಟು ಸುಧಾರಣೆಯನ್ನುಂಟು ಮಾಡಿತು. ಮೊಫ್ಯೂಸಿಲ್ ದೀವಾಣೀ ಅದಾಲತಗಳನ್ನು ಪುನಃಶ್ಚೇತನಗೊಳಿಸಲಾಯಿತು. ಪ್ರತಿಯೊಂದು ಜಿಲ್ಲೆಗೆ ಒಂದು ದೀವಾಣೀ ಅದಾಲತನ್ನು ಅಲ್ಲದೆ, ಪಾಟ್ನಾ ಮುರ್ಶಿದಾಬಾದ ಮತ್ತು ಡಾಕ್ಕಾ ಪಟ್ಟಣಗಳಲ್ಲೂ ಸ್ಥಾಪಿಸಲಾಯಿತು. ಪ್ರತಿಯೊಂದು ದೀವಾಣೀ ಅದಾಲತವು ಕಂಪನಿಯ ಪ್ರತಿಷ್ಠಿತ ಸೇವಕನ ಅಧ್ಯಕ್ಷತೆಯಲ್ಲಿ ಕಾರ್ಯ ನಿರ್ವಹಿಸುತ್ತಲಿತ್ತು.

ಕಲಕತ್ತೆಯಲ್ಲಿ ಸ್ಥಾಪನೆಗೊಂಡ ಸದರ ದೀವಾಣೀ ಅದಾಲತಕ್ಕೆ ಹೋಗಿ ಬರುವ ವಿಲಂಬನೆಯನ್ನು ತಪ್ಪಿಸಲೋಸುಗ, ಕಲಕತ್ತಾ, ಪಾಟ್ನಾ, ಮುರ್ಶಿದಾಬಾದ

ಮತ್ತು ಡಾಕ್ಕಾಗಳಲ್ಲಿ ಕೋರ್ಟ ಆಫ್ ಅಪೀಲ್ (Court of appeal) ಎಂಬ ಮೇಲ್ಮನವಿ ಪ್ರಾಧಿಕಾರವುಳ್ಳ ನ್ಯಾಯಾಲಯವನ್ನು ಸ್ಥಾಪಿಸಲಾಯಿತು. ಈ ನ್ಯಾಯಾಲಯವು ಮೂವರು ಇಂಗ್ಲೀಷ ಪ್ರತಿಷ್ಠಿತ ನಾಗರಿಕರ ಅಧ್ಯಕ್ಷತೆಯಲ್ಲಿ ಕಾರ್ಯ ನಿರ್ವಹಿಸುತ್ತಲಿತ್ತು. ಮೊಫ್ಯೂಸಿಲ್ ದೀವಾಣೀ ಅದಾಲತಗಳಿಂದ ಯಾವುದೇ ಮೊತ್ತದ ವ್ಯಾಜ್ಯದ ಮೇಲ್ಮನವಿ ಸ್ವೀಕರಿಸಬಹುದಾದ ಅಧಿಕಾರವನ್ನು ಹೊಂದಿತ್ತು. ಸರಕಾರ ಅಥವಾ ಸದರ ದೀವಾಣೀ ಅದಾಲತಗಳಿಂದ ಬಂದ ಮೂಲ ದಾವೆಗಳ ವಿಚಾರಣಾ ಅಧಿಕಾರವನ್ನೂ ಹೊಂದಿತ್ತು. ಇದು ಮೋಫ್ಯೂಸಿಲ್ ದೀವಾಣೀ ಅದಾಲತಗಳ ಮೇಲಿನ ಮೇಲ್ವಿಚಾರಣಾ ಅಧಿಕಾರವನ್ನೂ ಹೊಂದಿತ್ತು. ಸದರ ದೀವಾಣೀ ಅದಾಲತಕ್ಕೆ ಮೇಲ್ವಿಚಾರಣಾ ಅಧಿಕಾರವನ್ನು ನೀಡಲಾಯಿತು. ಇದರಿಂದಾಗಿ ನ್ಯಾಯದಾನ ಕಾರ್ಯವು ಸುರಳಿತಗೊಂಡಿತು. ಸಣ್ಣ ಪುಟ್ಟ ವ್ಯಾಜ್ಯಗಳ ಇತ್ಯರ್ಥಕ್ಕಾಗಿ ಮುನ್ಸೀಫ್ ನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು. ಇದರಿಂದಾಗಿ ಜಿಲ್ಲಾ ನ್ಯಾಯಾಲಯಗಳಲ್ಲಿಯ ಕಾರ್ಯಭಾರದ ಒತ್ತಡವು ಕಡಿಮೆಯಾಯಿತು. ಈ ಮುನ್ಸಿಫ್‌ರ ನೇಮಕಾತಿಯನ್ನು ಮೊಫ್ಯೂಸಿಲ್ ಅದಾಲತಗಳು ಸದರ ದೀವಾಣೀ ಅದಾಲತದ ಸಮ್ಮತಿ ಪಡೆದುಕೊಂಡು ಮಾಡಬೇಕಾಗುತ್ತಿತ್ತು. ಇಂಥಹ ಮುನ್ಸಿಫ್‌ರು ದೊಡ್ಡ ದೊಡ್ಡ ರೈತರುಗಳಿಂದ ಆರಿಸಲ್ಪಡುತ್ತಿದ್ದರು. ನ್ಯಾಯದಾನದ ಕಾರ್ಯವು ನಿಷ್ಪಕ್ಷಪಾತದಿಂದ ನಡೆಯಬೇಕಿದ್ದರೆ, ನ್ಯಾಯಾಧೀಶರು ಸತ್ಯಶೀಲವಂತರಾಗಿರಬೇಕೆಂಬ ತತ್ವಕ್ಕೆ ಕಾರ್ನವಾಲೀಸನು ಬಲವಾಗಿ ಅಂಟಿಕೊಂಡವನಾಗಿದ್ದನು. ನ್ಯಾಯಾಧೀಶರು ನೇರವಾಗಿ ಪಕ್ಷಗಾರರೊಂದಿಗೆ ಪತ್ರ ವ್ಯವಹಾರ ಮಾಡುವುದನ್ನು ಪ್ರತಿಬಂಧಿಸಿದನು. ನ್ಯಾಯದಾನವು ದುಬಾರಿಯಾಗಬಾರದೆಂಬ ಉದ್ದೇಶದಿಂದ ಕಾರ್ನವಾಲೀಸನು ಕೋರ್ಟ ಫಿ ಯನ್ನು ರದ್ದುಗೊಳಿಸಿದನು. ಅದರಿಂದಾಗಿ ಬಡ ಪಕ್ಷಗಾರರು ನ್ಯಾಯಾಲಯದ ಮೂಲಕ ತಮ್ಮ ಹಕ್ಕನ್ನು ಗಳಿಸಿಕೊಳ್ಳುವಲ್ಲಿ ಅಡ್ಡಿಯಾಗುತ್ತಿದ್ದ ಹಣದ ತೊಂದರೆಯು ದೂರವಾದಂತಾಯಿತು.

ಕ್ರಿಮಿನಲ್ ನ್ಯಾಯದಾನದಲ್ಲಿ ಅನೇಕ ಬದಲಾವಣೆಗಳನ್ನು ಮಾಡಲಾಯಿತು. ಕಲೆಕ್ಟರನಲ್ಲಿ ನಿಹಿತವಾಗಿದ್ದ ನ್ಯಾಯನಿರ್ಣಯ ಅಧಿಕಾರವನ್ನು ಕಿತ್ತಿಹಾಕಿ ಮೊಫ್ಯೂಸಿಲ್ ದೀವಾಣೀ ಅದಾಲತಕ್ಕೆ ವಹಿಸಿಕೊಡಲಾಯಿತು. ಕೋರ್ಟ ಆಫ್ ಅಪೀಲ ಮತ್ತು ವಲಯ ನ್ಯಾಯಾಲಯಗಳನ್ನು ವಿಲೀನಗೊಳಿಸಿ ನಾಲ್ಕು ಕೋರ್ಟ ಅಫೀಲ ಮತ್ತು ವಲಯಗಳನ್ನು ಸ್ಥಾಪಿಸಲಾಯಿತು. ಅವು ಮೂವರು ನ್ಯಾಯಾಧೀಶರನ್ನೊಳಗೊಂಡಿದ್ದವು.

ವಾರೆನ್ ಹೇಸ್ಟಿಂಗ್ಸ್‌ನ ಕಾಲದವರೆಗಿನ ಎಲ್ಲ ನಿಯಮ; ನಿಯಮಾವಳಿಗಳು ಅಲ್ಲಲ್ಲಿ ಹರಡಿಕೊಂಡಿದ್ದು ಎಲ್ಲ ನಾಗರಿಕರಿಗೆ ಲಭ್ಯವಾಗುವ ರೀತಿಯಲ್ಲಿರಲಿಲ್ಲ. ಅವುಗಳ ಕ್ರೋಢೀಕರಣಕ್ಕೆ ಮತ್ತು ಎಲ್ಲ ಜನರಿಗೆ ಸುಲಭವಾಗಿ ಲಭ್ಯವಾಗುವಂತೆ ಕ್ರಮ ಕೈಗೊಳ್ಳಲಾಯಿತು. ಕಾನೂನು ವ್ಯವಹರಣೆ ಮಾಡುವ ಕುರಿತು ಅನೇಕ ನೀತಿ ನಿಯಮಗಳನ್ನು ನಿರೂಪಿಸಿದನು.

ಕಾರ್ನವಾಲೀಸನ ಸುಧಾರಣಾ ಪದ್ಧತಿಯು ನ್ಯಾಯದಾನದಲ್ಲಿ ಸಾಕಷ್ಟು ಸುಧಾರಣೆಯನ್ನು ಮಾಡುವಲ್ಲಿ ಯಶಸ್ವಿಯಾದರೂ ಅನೇಕ ಸಮಸ್ಯೆಗಳು ಉದ್ಭವಿಸಿದವು. ಕೋರ್ಟು ಫೀ ರದ್ದತಿಯಿಂದಾಗಿ ದೀವಾಣೀ ನ್ಯಾಯಾಲಯ ಗಳು ಅನೇಕ ರೀತಿಯ ವ್ಯಾಜ್ಯಗಳಿಂದ ತುಂಬಿ ಹೊರಲಾರದ ಹೊರೆಯಾಗಿ ಪರಿಣಮಿಸಿತು. ಭಾರತೀಯ ಮತ್ತು ಇಂಗ್ಲೀಷ ನ್ಯಾಯಾಧೀಶರು ಭ್ರಷ್ಟರಾಗಿರು ವುದರಿಂದ ನ್ಯಾಯಾಲಯಗಳು ಭ್ರಷ್ಟ ಮಾರ್ಗಗಳಿಂದ ಹಣ ಗಳಿಸುವ ಸಾಧನವಾಗಿ ಪರಿವರ್ತನಗೊಂಡಿತು. ಭಾರತೀಯ ಪ್ರಜೆಗಳಿಗೆ ಸಮಾನ ಅವಕಾಶ ಕಲ್ಪಿಸದಿರು ವುದರಿಂದ ಅಸಂತೋಷಕ್ಕೆ ನಾಂದಿಯಾಯಿತು. ಇದು ಭಾರತೀಯ ಪ್ರಜೆಗಳ ಆತ್ಮಗೌರವಕ್ಕೆ ಧಕ್ಕೆಯನ್ನುಂಟುಮಾಡಿತು. ಆದರೂ, ಕಾರ್ನವಾಲೀಸ ನ್ಯಾಯಿಕ ಸುಧಾರಣೆಯು ಭಾರತದಲ್ಲಿ ನ್ಯಾಯದಾನದಲ್ಲಿ ಸುಧಾರಣೆಯನ್ನುಂಟು ಮಾಡುವಲ್ಲಿ ಬಹಳಷ್ಟು ಪ್ರಮಾಣದಲ್ಲಿ ಸಹಾಯಕಾರಿಯಾಯಿತೆಂದು ಹೇಳಬಹುದಾಗಿದೆ.

## 6. ಅದಾಲತ ನ್ಯಾಯದಾನ ಪದ್ಧತಿಗೆ ಸರ ಜಾನ ಶೋರನ ಕಾಣಿಕೆ (Shore's contribution to Adalat system)

ಕಾರ್ನವಾಲೀಸನ ನಂತರ ಬಂದ ಸರ ಜಾನ ಶೋರನು, ಕಾರ್ನವಾಲೀಸನ ನ್ಯಾಯದಾನ ಪದ್ಧತಿಯಲ್ಲಿ ಹಲವಾರು ತಪ್ಪುಗಳನ್ನು ಕಂಡುಕೊಂಡನು. ಅವು ಗಳಲ್ಲಿ ಸುಧಾರಣೆಯನ್ನುಂಟು ಮಾಡುವ ಉದ್ದೇಶದಿಂದ ಅವನು ಈ ಕೆಳಗಿನ ಸುಧಾರಣೆಯನ್ನು ಮಾಡಿದನು.

ಸುಧಾರಣೆಯ ಮೊದಲನೆಯ ಘಟ್ಟವಾಗಿ 1794 ರಲ್ಲಿ 8 ನೇ ರೆಗ್ಯುಲೇಶನ್ ಪಾಸು ಮಾಡಿದನು. ಅದರ ಪರಿಣಾಮವಾಗಿ, 25 ರೂಪಾಯಿಗಳಿಗೆ ಮಿಕ್ಕದ ವ್ಯಾಜ್ಯಗಳ ನಿರ್ಣಯದ ಅಂತಿಮ ಅಧಿಕಾರವನ್ನು ರಜಿಸ್ಟ್ರಾರರಿಗೆ ವಹಿಸಿಕೊಡ ಲಾಯಿತು. ಆ ನಂತರದ ಮೊತ್ತದ ವ್ಯಾಜ್ಯಕ್ಕೆ ಸಂಬಂಧಪಟ್ಟ ಪ್ರಕರಣಗಳನ್ನು ಪ್ರಾವ್ಹಿನ್ಸಿಯಲ್ ಕೋರ್ಟ ಆಫ್ ಅಪೀಲಕ್ಕೆ ಮನವಿಯನ್ನು ಸಲ್ಲಿಸುವಂತೆ ಬಳಕೆ ಯಲ್ಲಿ ತಂದನು. ಇದರಿಂದಾಗಿ ದೀವಾಣೀ ಅದಾಲತಗಳಲ್ಲಿ ತುಂಬಿಹೋದ ಪ್ರಕರಣಗಳ ಸಂಖ್ಯೆ ಕಡಿಮೆಯಾಗತೊಡಗಿತು.

ಈ ಮೊದಲನೆ ಕಾರ್ನವಾಲೀಸನ ಸುಧಾರಣಾ ಪದ್ಧತಿಯಲ್ಲಿ ನ್ಯಾಯಿಕ ಕಾರ್ಯದಿಂದ ವಿಮುಕ್ತಿಯನ್ನು ಪಡೆದುಕೊಂಡ ಕಲೆಕ್ಟರರಿಗೆ ಕೆಲವೊಂದು ನ್ಯಾಯಿಕ ಕಾರ್ಯಗಳನ್ನು ವಹಿಸಿಕೊಡಲಾಯಿತು. ಇದರಿಂದಾಗಿ, ದೀವಾಣೀ ಅದಾಲತದ ನ್ಯಾಯಾಧೀಶರು ತಮ್ಮ ಮುಂದೆ ಇತ್ಯರ್ಥಕ್ಕಾಗಿ ಮಂಡಿಸಲಾದ ಪ್ರಕರಣಗಳ ಕುರಿತಾದ ಲೆಕ್ಕಪತ್ರ, ಕಂದಾಯ, ಬಾಡಿಗೆ ಇತ್ಯಾದಿ ಕುರಿತಾದ ವಿಷಯಕ್ಕೆ ಸಂಬಂಧಪಟ್ಟ ಪ್ರಕರಣಗಳಲ್ಲಿ ಅವರ ವರದಿಗನುಗುಣವಾಗಿ ಪ್ರಕರಣದ ಇತ್ಯರ್ಥ ಮಾಡುವ ಕ್ರಮ ಕೈಕೊಳ್ಳಲಾರಂಭಿಸಿದರು. ಇದರಿಂದಾಗಿ ದೀವಾಣೀ ಅಧಾಲತದ ನ್ಯಾಯಾಧೀಶರ ಕಾರ್ಯಭಾರವು ಕಡಿಮೆಯಾಗತೊಡಗಿತು.

1974 ರಲ್ಲಿ ಜಾರಿಗೆ ತಂದ ರೆಗ್ಯುಲೇಶನ್ ಕಾಯ್ದೆಯು ಪರಿಸ್ಥಿತಿಯನ್ನು ಸುಧಾರಿಸುವಲ್ಲಿ ಸಾಕಷ್ಟು ಪರಿಣಾಮಕಾರಿಯಾಗಲಿಲ್ಲ. ದೀವಾಣೀ ಅದಾಲತದಲ್ಲಿ ಇತ್ಯರ್ಥಕ್ಕಾಗಿ ಬಂದ ಪ್ರಕರಣಗಳ ಸಂಖ್ಯೆಯಲ್ಲಿ ಯಾವ ಸುಧಾರಣೆಯೂ ಕಂಡು ಬರಲಿಲ್ಲ. ಇದರಿಂದಾಗಿ 1795 ರಲ್ಲಿ ಇನ್ನೂ ಹೆಚ್ಚಿನ ಕ್ರಮ ಕೈಕೊಳ್ಳಲಾಯಿತು. ಅವು ಈ ಕೆಳಗಿನಂತಿವೆ—

i) ಬಾಡಿಗೆ ಮತ್ತು ಭೂಸಾಗುವಳಿ ಕುರಿತು ಜಮೀನುಧಾರರಿಗೆ ಕೆಲ ಅಧಿಕಾರಗಳನ್ನು ನೀಡಲಾಯಿತು. ಅದರಿಂದಾಗಿ ಅವರು ಬಾಡಿಗೆದಾರರಿಂದ ಮತ್ತು ಸಾಗುವಳಿದಾರರಿಂದ ಹಣ ಪಡೆಯುವಲ್ಲಿ ಸಹಾಯಕಾರಿಯಾಯಿತು. ಅದು ಅದಾಲತದ ಪ್ರಕರಣಗಳ ಸಂಖ್ಯೆಯನ್ನು ಸಾಕಷ್ಟು ಪ್ರಮಾಣದಲ್ಲಿ ತಗ್ಗಿಸಿತು.

ii) ರಜಿಸ್ಟ್ರಾರರ ನಿರ್ಣಯದ ವಿರುದ್ಧ ಪ್ರಾವ್ಹಿನ್ಸಿಯಲ್ ಕೋರ್ಟ ಆಫ್ ಅಪೀಲಿಗೆ ಬದಲಾಗಿ, ಜಿಲ್ಲಾ ದೀವಾಣೀ ಅದಾಲತಕ್ಕೆ ಮೇಲ್ಮನವಿ ಸಲ್ಲಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಅಲ್ಲದೆ, ಜಿಲ್ಲಾ ದೀವಾಣೀ ಅದಾಲತದ ನಿರ್ಣಯವನ್ನು ಅಂತಿಮವೆಂದು ಪರಿಗಣಿಸಲಾಯಿತು.

iii) ಈ ಮೊದಲಿನ ರೆಗ್ಯುಲೇಶನ್ ಪ್ರಕಾರ, ಮುನ್ಸಿಫ್‌ರ ನಿರ್ಣಯದ ವಿರುದ್ಧ ಜಿಲ್ಲಾ ದೀವಾಣೀ ಅದಾಲತಕ್ಕೆ ಎರಡು ಮೇಲ್ಮನವಿಯನ್ನು ಸಲ್ಲಿಸುವ ಅವಕಾಶವಿತ್ತು. 1795 ರ ರೆಗ್ಯುಲೇಶನ್‌ದಲ್ಲಿ ಇದನ್ನು ತೊಡೆದುಹಾಕಲಾಯಿತಲ್ಲದೇ, ಬಂದ ಮೇಲ್ಮನವಿಗೆ ಅವಕಾಶವನ್ನು ನೀಡಲಾಯಿತು.

iv) ವ್ಯಾಜ್ಯಗಳನ್ನು ಕಡಿಮೆ ಮಾಡುವುದಕ್ಕೆಂದೇ, ಕೋರ್ಟ ಫೀಯನ್ನು ಮತ್ತೆ ಜಾರಿಗೆ ತರಲಾಯಿತು. ಇದು ಅನವಶ್ಯಕ ವ್ಯಾಜ್ಯಗಳ ಹತೋಟಿ ಮತ್ತು ನಿಯಂತ್ರಣಕ್ಕೆ ಸಾಕಷ್ಟು ಸಹಾಯಕಾರಿಯಾಯಿತು.

ಕೇವಲ ನಾಮಮಾತ್ರವಾಗಿ ಉಳಿದ ಕೋರ್ಟ ಫೀಯಿಂದಾಗಿ ವ್ಯಾಜ್ಯಗಳ ಸಂಖ್ಯೆಯು ಅಷ್ಟೊಂದು ಪ್ರಮಾಣದಲ್ಲಿ ಕಡಿಮೆಯಾಗದಿರದ್ದರಿಂದ ಕೋರ್ಟ ಫೀದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಹೆಚ್ಚಳವನ್ನುಂಟು ಮಾಡಲು, 1797 ರಲ್ಲಿ ಇನ್ನೂ ಕೆಲವು ಬದಲಾವಣೆಯನ್ನು ಮಾಡಲಾಯಿತು. 5000 ರೂಪಾಯಿಗಳ ಮೌಲ್ಯದ ವ್ಯಾಜ್ಯಗಳ ನಿರ್ಣಯದ ಅಧಿಕಾರವನ್ನು ಪ್ರಾವ್ಹಿನ್ಸಿಯಲ್ಲಿ ಕೋರ್ಟ ಆಫ್ ಅಪೀಲಕ್ಕೆ ನೀಡಲಾಯಿತು. ಆ ನಂತರದ ಮೊತ್ತದ ವ್ಯಾಜ್ಯದ ಅದರ ನಿರ್ಣಯದ ಮೇಲೆ ಸದರ ದೀವಾಣೀ ಅದಾಲತಕ್ಕೆ ಮೇಲ್ಮನವಿಯನ್ನು ಸಲ್ಲಿಸುವ ಅವಕಾಶವನ್ನು ನೀಡಲಾಯಿತು. ಸದರ ಅದಾಲತದಿಂದ ರಾಜ ಮಂತ್ರಾಲೋಚನ ಸಭೆಗೆ ಮೇಲ್ಮನವಿಯನ್ನು ಸಲ್ಲಿಸುವ ನಿಯಮಗಳನ್ನು ನಿರೂಪಿಸಲಾಯಿತು. ಮೇಲ್ಮನವಿ ಸಲ್ಲಿಸಬಹುದಾದ ಅವಧಿಯನ್ನು ನಿಗದಿತಗೊಳಿಸಲಾಯಿತು. ಅದು ಆರು ತಿಂಗಳ ಕಾಲಾವಧಿಯನ್ನು ಮೀರತಕ್ಕದ್ದಲ್ಲವೆಂದು ನಿರ್ದೇಶಿಸಲಾಯಿತು.

ಮ್ಯಾಜಿಸ್ಟ್ರೇಟರರ ಕಾರ್ಯದಕ್ಷತೆಯನ್ನು ಹೆಚ್ಚಿಸುವುದಕ್ಕೋಸ್ಕರ, ಅವರಿಗೆ ಕೆಲವೊಂದು ನಿಯಂತ್ರಿತ ನ್ಯಾಯಿಕ ಅಧಿಕಾರವನ್ನು ಹೊಂದಿದ ಸಹಾಯಕರನ್ನು

ನಿಯಮಿಸಲಾಯಿತು. ಇದರಿಂದಾಗಿ ಕ್ರಿಮಿನಲ್ ಮೊಕದ್ದಮೆಗಳು ಇನ್ನೂ ತೀವ್ರಗತಿಯಿಂದ ಇತ್ಯರ್ಥವಾಗುವಂತಾಯಿತು.

**7. ಲಾರ್ಡ ವೆಲ್ಲೆಸ್ಲಿಯ ನ್ಯಾಯಿಕ ಸುಧಾರಣೆಗಳು (Judicial Reforms by Lord Wellesly)**

ಸರ ಜಾನ್ ಶೋರನ ನಂತರ ಗವ್ಹರ್ನರ ಜನರಲ್‌ನಾಗಿ ಭಾರತಕ್ಕೆ ಬಂದ ಲಾರ್ಡ ವೆಲ್ಲೆಸ್ಲಿಯು ನ್ಯಾಯದಾನ ಪದ್ಧತಿಯಲ್ಲಿ ಸುಧಾರಣೆಯನ್ನುಂಟು ಮಾಡುವ ಉದ್ದೇಶದಿಂದ ಈ ಕೆಳಗಿನ ಕ್ರಮ ಕೈಕೊಂಡನು.

**(i) ಸದರ ಅದಾಲತಗಳ ಸಂಯೋಜನೆಯಲ್ಲಿ ಸುಧಾರಣೆ (Reforms in the constitution of Sadar Adalat)**

ವೆಲ್ಲೆಸ್ಲಿಯು ಗವ್ಹರ್ನರ ಜನರಲ್ ಮಂತ್ರಾಲೋಚನ ಸಭೆಯ ಸಂಯೋಜನೆಯಲ್ಲಿ ಹಲವಾರು ನ್ಯೂನತೆಗಳನ್ನು ಕಂಡುಕೊಂಡನು. ಕಾರ್ಯನಿರ್ವಾಹಕ, ನ್ಯಾಯಿಕ ಮತ್ತು ಶಾಸನ ನಿರ್ಮಾಣ ಅಧಿಕಾರವನ್ನು ಒಂದೇ ವ್ಯಕ್ತಿಯಲ್ಲಿ ಕೇಂದ್ರೀಕರಿಸುವುದರಿಂದಾಗಿ, ಉಂಟಾಗಬಹುದಾದ ತೊಂದರೆಗಳಿಂದ ವಿಮುಕ್ತಿಯನ್ನು ದೊರಕಿಸಿಕೊಡುವುದಕ್ಕಾಗಿ ಅಧಿಕಾರ ವಿಕೇಂದ್ರೀಕರಣಕ್ಕೆ ಸಾಕಷ್ಟು ಪ್ರಾಧಾನ್ಯತೆಯನ್ನು ನೀಡಿದನು.

ಗವ್ಹರ್ನರ ಜನರಲ್‌ನು ಸಾಮಾನ್ಯವಾಗಿ ಭಾರತದ ಸ್ಥಾನಿಕ ಭಾಷೆಯನ್ನು ಅರಿಯದವನಾಗಿದ್ದರಿಂದ, ಅವನಿಗೆ ತಿಳಿಯುವಂತೆ ಭಾಷಾಂತರ ಮಾಡಿ ಅವನ ಗಮನಕ್ಕೆ ತರುವ ಕಾರ್ಯದಲ್ಲಿ ಸಾಕಷ್ಟು ಪ್ರಮಾಣದ ಸಮಯ ವ್ಯಯವಾಗುತ್ತಲಿತ್ತು. ಆದರಿಂದಾಗಿ ಅವನಿಗೆ ಅವನ ಕಾರ್ಯ ನಿರ್ವಹಣೆಯಲ್ಲಿ ಸಾಕಷ್ಟು ವಿಲಂಬನೆಯುಂಟಾಗುತ್ತಿತ್ತು. ಅದಕ್ಕಾಗಿ, ಮೂವರು ಸದಸ್ಯರುಳ್ಳ ಒಂದು ನ್ಯಾಯಾಲಯದ ಸ್ಥಾಪನೆಗಾಗಿ ಕ್ರಮ ಕೈಗೊಂಡನು. ಈ ನ್ಯಾಯಾಲಯದ ಮುಖ್ಯ ನ್ಯಾಯಾಧೀಶನು ಮಂತ್ರಾಲೋಚನ ಸಭೆಯ ಒಬ್ಬ ಕಿರಿಯ ಸದಸ್ಯನಾಗಿದ್ದು ಅವನಿಗೆ ನ್ಯಾಯಿಕ ಕಾರ್ಯದಲ್ಲಿ ತಿಳುವಳಿಕೆಯನ್ನು ಹೊಂದಿದವನಾಗಿದ್ದನು. ಇನ್ನುಳಿದ ಇಬ್ಬರೂ ಸದಸ್ಯರು ಸಮಾಜದ ಉನ್ನತ ಸ್ಥಾನದಲ್ಲಿರುವ ನಾಗರಿಕರಾಗಿದ್ದು ಕಂಪನಿಯ ಸೇವಕರಾಗಿದ್ದರು. ಅವರಿಗೆ ಪ್ರಾವ್ಹಿನ್ಸಿಯಲ್ ನ್ಯಾಯಾಲಯದಲ್ಲಿ ಕಾರ್ಯ ನಿರ್ವಹಿಸಿದ ಅನುಭವವಿರುವ ಅವಶ್ಯಕತೆ ಇತ್ತು.

**(ii) ನ್ಯಾಯದಾನದಲ್ಲಿ ತೀವ್ರಗತಿಯನ್ನುಂಟು ಮಾಡಲು ಸುಧಾರಣೆಗಳು (Reforms to promote quick disposals)**

ನ್ಯಾಯಾಲಯದಲ್ಲಿ ತೀವ್ರಗತಿಯನ್ನುಂಟು ಮಾಡಲು, ಈ ಮೊದಲು ಹಲವಾರು ಕ್ರಮ ಕೈಕೊಂಡಾಗ್ಯೂ ಅಷ್ಟೊಂದು ಹೇಳಿಕೊಳ್ಳುವಂಥಹ ಸುಧಾರಣೆ ಏನೂ ಆಗಿರಲಿಲ್ಲ. ಹಲವಾರು ನ್ಯಾಯಾಲಯಗಳಲ್ಲಿ ಅನೇಕ ಪ್ರಕರಣಗಳು

ಇತ್ಯರ್ಥವಾಗದೆಯೇ ಬಿದ್ದುಕೊಂಡಿದ್ದವು. ಜಿಲ್ಲಾ ಮತ್ತು ಸಿಟಿಕೋರ್ಟು, ಕೋರ್ಟ ಆಫ್ ರಜಿಸ್ಟ್ರಾರ, ಮತ್ತು ಸ್ಥಾನಿಕ ಕಮೀಶನರಗಳ ಮುಂದಿನ ಪ್ರಕರಣ ಗಳ ಸಂಖ್ಯೆಯಂತೂ ಇನ್ನೂ ಹೆಚ್ಚಿನ ಪ್ರಮಾಣದಲ್ಲಿತ್ತು. ಇದರಲ್ಲಿ ಸುಧಾರಣೆ ಯನ್ನುಂಟುಮಾಡಲು ಲಾರ್ಡ ವೆಲ್ಲೆಸ್ಲಿಯು ಈ ಕೆಳಗಿನಂತೆ ಕ್ರಮ ಕೈಗೊಂಡನು.

i) ತೀವ್ರತರ ಪ್ರಕರಣಗಳ ನಿರ್ಣಯ ನೀಡಲು ಮುಖ್ಯ ಸ್ಥಾನಿಕ ಕಮೀಶನರ ಅಥವಾ ಸದರ ಅಮೀನರೆಂದು ಜಿಲ್ಲಾ ಮತ್ತು ಸಿಟಿ ಕೋರ್ಟುಗಳಲ್ಲಿ ನೇಮಕಾತಿಯನ್ನು ಮಾಡಿದನು. ಒಂದು ನೂರು ರೂಪಾಯಿ ಮೌಲ್ಯದ ಒರೆಗಿನ ಪ್ರಕರಣಗಳ ಇತ್ಯರ್ಥ ಮಾಡುವ ಅರ್ಹತೆಯನ್ನು ಅವರು ಪಡೆದವರಾಗಿ ದ್ದರು. ಸದರ ಅಮೀನರಿಗೆ ಸಂಬಳವಿರಲಿಲ್ಲ. ಅವರು ತಾವು ನಿರ್ಣಯಿಸಿದ ಪ್ರಕರಣಗಳಲ್ಲಿಯ ಕಮೀಶನ್ ಪಡೆದುಕೊಳ್ಳಬಹುದಾಗಿತ್ತು.

ii) ಸದರ ಅಮೀನರ ಹೊರತಾಗಿ, ಜಿಲ್ಲಾ ಮತ್ತು ಸಿಟಿ ಕೋರ್ಟು ಗಳಲ್ಲಿ ಸಹಾಯಕ ನ್ಯಾಯಾಧೀಶರನ್ನು ನಿಯಮಿಸಲಾಯಿತು. ಅವರಿಗೆ ಕೋರ್ಟ ಆಫ್ ರಜಿಸ್ಟ್ರಾರ ಅಥವಾ ಸ್ಥಾನಿಕ ಕಮೀಶನರಗಳಿಂದ ಮೇಲ್ಮನವಿಯನ್ನು ಮತ್ತು ಮೂಲ ದಾವೆಗಳನ್ನು ಪರಾಮರ್ಶಿಸುವ ಮತ್ತು ನಿರ್ಣಯ ನೀಡುವ ಅಧಿಕಾರವನ್ನು ನೀಡಲಾಯಿತು.

iii) ಕೋರ್ಟ ಆಫ್ ರಜಿಸ್ಟ್ರಾರರಿಗೆ 500 ರೂಪಾಯಿ ಮೌಲ್ಯದವರೆಗಿನ ಮೊತ್ತದ ಪ್ರಕರಣಗಳನ್ನು ನಿರ್ಣಯಿಸುವ ಅಧಿಕಾರವನ್ನು ನೀಡಲಾಯಿತು.

iv) ಸ್ಥಾನಿಕ ಕಮೀಶನರ ನಿರ್ಣಯದ ಮೇಲ್ಮನವಿಯ ವಿಚಾರಣೆಯಲ್ಲಿ ಜಿಲ್ಲಾ ಮತ್ತು ಸಿಟಿ ನ್ಯಾಯಾಲಯದ ನಿರ್ಣಯವನ್ನು ಅಂತಿಮವೆಂದು ಆದೇಶಿಸ ಲಾಯಿತು.

## 8. ಲಾರ್ಡ ಹೇಸ್ಟಿಂಗ್ಸ್‌ನ ನ್ಯಾಯಿಕ ಸುಧಾರಣೆಗಳು (Reforms introduced by Lord Hastings)

ಲಾರ್ಡ ಮಿಂಟೋನ ತರುವಾಯ 1813 ರಲ್ಲಿ ಗವ್ಹರ್ನರ ಜನರಲ್‌ನಾಗಿ ಬಂದ ಲಾರ್ಡ ಹೇಸ್ಟಿಂಗ್ಸ್‌ನು ಸ್ವಭಾವತಃ ಅತ್ಯಂತ ವಿಚಾರಶೀಲನೂ, ಸ್ವತಂತ್ರ ವಿಚಾರವಾದಿಯೂ ಆಗಿದ್ದು ಭಾರತೀಯರ ಬಗ್ಗೆ ಅತ್ಯಂತ ಗೌರವ ಆದರಗಳನ್ನು ಹೊಂದಿದವನಾಗಿದ್ದನು.

ಲಾರ್ಡ ಹೇಸ್ಟಿಂಗ್ಸ್‌ನು ಕಾರ್ನವಾಲೀಸನ ಪದ್ಧತಿಯನ್ನು ಸಮಗ್ರವಾಗಿ ಬದಲಿಸಿ ನ್ಯಾಯಿಕ ಮತ್ತು ಕಂದಾಯ ವಸೂಲಿ ಅಧಿಕಾರವನ್ನು ಒಬ್ಬನೇ ವ್ಯಕ್ತಿ ಯಲ್ಲಿ ಕೇಂದ್ರೀಕರಿಸಿದನು. ಅವನು ಅಧಿಕಾರ ವಹಿಸಿಕೊಳ್ಳುವುದಕ್ಕಿಂಥ ಪೂರ್ವ ದಲ್ಲಿ ದೇಶದ ಕ್ರಿಮಿನಲ್ ನ್ಯಾಯದಾನ ಪದ್ಧತಿಯಲ್ಲಿ ಸಾಕಷ್ಟು ಅವ್ಯವಸ್ಥೆ ಇತ್ತು. ಕೊಲೆ, ಸುಲಿಗೆ, ದರೋಡೆ ಇತ್ಯಾದಿಗಳು ಸರ್ವಸಾಮಾನ್ಯ ಅಪರಾಧಗಳಾಗಿದ್ದವು. ಹೀನ ಅಪರಾಧಗಳಾದ ಕೊಲೆ, ಸುಲಿಗೆ, ದರೋಡೆಯಂಥಹ ಪ್ರಕರಣಗಳಲ್ಲಿ

ಅಪರಾಧವನ್ನು ಸಿದ್ಧ ಮಾಡುವ ವಿಧಾನವು ಅತ್ಯಂತ ಕಠಿಣತಮವಾಗಿತ್ತು. ಸಾಕ್ಷಿ ಆಧಾರಗಳನ್ನು ಒದಗಿಸಿ ಅಪರಾಧ ಸಿದ್ಧಪಡಿಸುವ ಕಾರ್ಯವು ಅಷ್ಟೊಂದು ತೃಪ್ತಿಕರವಾಗಿರಲಿಲ್ಲ. ನ್ಯಾಯಾಲಯದೆದುರು ಬಾಯಿಮಾತಿನಿಂದ ಸಾಕ್ಷಿ ಒದಗಿಸುವ ಕಾರ್ಯವು ಕಠಿಣತಮ ಕಾರ್ಯವಾಗಿತ್ತು. ಇದನ್ನು ಅನುಲಕ್ಷಿಸಿ, ಲಾರ್ಡ ಹೇಸ್ಟಿಂಗ್ಸ್‌ನು ಈ ಕೆಳಗಿನ ಸುಧಾರಣಾ ಪದ್ಧತಿಯನ್ನು ಜಾರಿಗೆ ತಂದನು.

i) ದೀವಾಣೀ ಪ್ರಕರಣಗಳಲ್ಲಿ ಉಂಟಾಗಬಹುದಾದ ವಿಳಂಬವನ್ನು ತಪ್ಪಿಸಲು, ಮುನ್ಸೀಫ್‌ರ ಮೌಲ್ಯ ಪ್ರಾಧಿಕಾರವನ್ನು (Pecuniary jurisdiction) ಹೆಚ್ಚಿಸಿದನು. ಅವನ ನಿರ್ಣಯದ ವಿರುದ್ಧ ಜಿಲ್ಲಾ ಮತ್ತು ಸಿಟಿ ಕೋರ್ಟುಗಳಿಗೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿತ್ತು. ಈ ಮೇಲ್ಮನವಿಯ ನಿರ್ಣಯವು ಅಂತಿಮದ್ದಾಗಿತ್ತು.

ii) ಇದೇ ರೀತಿಯಾಗಿ, ಸದರ ಅಮೀನ ನ್ಯಾಯಾಲಯದ ಮೌಲ್ಯ ಪ್ರಾಧಿಕಾರವನ್ನು ಹೆಚ್ಚಿಸಲಾಯಿತು. ಇಲ್ಲಿಯೂ, ಇದರ ನಿರ್ಣಯದ ಮೇಲೆ ಜಿಲ್ಲಾ ಮತ್ತು ದೀವಾಣೀ ನ್ಯಾಯಾಲಯಗಳಿಗೆ ಸಲ್ಲಿಸಲಾದ ಮೇಲ್ಮನವಿಯ ನಿರ್ಣಯವು ಅಂತಿಮವೆಂದು ಪರಿಗಣಿಸಲ್ಪಡುತ್ತಿತ್ತು.

iii) ಮೂರನೇಯದಾಗಿ, ಕೋರ್ಟ ಆಫ್ ರಜಿಸ್ಟ್ರಾರ ನ್ಯಾಯಾಲಯದ ಮೌಲ್ಯ ಪ್ರಾಧಿಕಾರವನ್ನು ಹೆಚ್ಚಿಸಲಾಯಿತು. ಇದರ ಪರಿಣಾಮವಾಗಿ, ಜಿಲ್ಲಾ ಮತ್ತು ಸಿಟಿ ನ್ಯಾಯಾಧೀಶರಿಂದ ಹಿಂತಿರುಗಿ ಕಳಿಸಲಾದ ಪ್ರಕರಣಗಳ ಮೌಲ್ಯ 500 ರೂಪಾಯಿಯ ವರೆಗೆ ವಿಚಾರಿಸಬಹುದಾದ ಅಧಿಕಾರವನ್ನು ರಜಿಸ್ಟ್ರಾರರಿಗೆ ನೀಡಲಾಯಿತು.

iv) ಸಹಾಯಕ ನ್ಯಾಯಾಧೀಶ ಹುದ್ದೆಯನ್ನು ರದ್ದುಪಡಿಸಲಾಯಿತು. ಜಿಲ್ಲಾ ಮತ್ತು ಸಿಟಿಕೋರ್ಟುಗಳಿಗೆ, 5000 ರೂಪಾಯಿ ಮೌಲ್ಯದ ವ್ಯಾಜ್ಯಗಳನ್ನು ವಿಚಾರಿಸಿ ನಿರ್ಣಯಿಸುವ ಅಧಿಕಾರವನ್ನು ನೀಡಲಾಯಿತು.

v) ಪ್ರಾವಿನ್ಷಿಯಲ್ ನ್ಯಾಯಾಲಯದ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಲಾಯಿತು.

ಈ ರೀತಿಯಾಗಿ ಎಲ್ಲ ಕೆಳನ್ಯಾಯಾಲಯಗಳ ಪ್ರಾಧಿಕಾರವನ್ನು ಹೆಚ್ಚಿಸುವುದರಿಂದಾಗಿ, ನ್ಯಾಯದಾನ ಪದ್ಧತಿಯಲ್ಲಿಯ ವಿಳಂಬವು ಗಮನಾರ್ಹವಾಗಿ ಕಡಿಮೆಯಾಯಿತು.

## ಕ್ರಿಮಿನಲ್ ನ್ಯಾಯದಾನದಲ್ಲಿ ಲಾರ್ಡ ಹೇಸ್ಟಿಂಗ್ಸ್‌ನ ಸುಧಾರಣೆ (Lord Hastings Judicial reforms in the Criminal law administration)

ದೀವಾಣೀ ನ್ಯಾಯದಾನ ಪದ್ಧತಿಯಲ್ಲಿ ಸುಧಾರಣೆಯನ್ನು ಮಾಡುವುದರೊಂದಿಗೆ, ಲಾರ್ಡ ಹೇಸ್ಟಿಂಗ್ಸ್‌ನು ಕ್ರಿಮಿನಲ್ ನ್ಯಾಯದಾನ ಪದ್ಧತಿಯಲ್ಲಿ

ಸುಧಾರಣೆಯನ್ನುಂಟು ಮಾಡುವ ಸಲುವಾಗಿ ಕ್ರಿಮಿನಲ್ ನ್ಯಾಯಾಲಯಗಳ ಸಂಯೋಜನೆಯಲ್ಲಿ ಈ ಕೆಳಗಿನ ಸುಧಾರಣೆಯನ್ನು ಮಾಡಿದನು.

i) ಅತೀ ಸಾಮಾನ್ಯ ಶಿಕ್ಷೆಯನ್ನು ವಿಧಿಸಬಹುದಾದ ಕ್ಷುಲ್ಲಕ ಅಪರಾಧಿಗಳ ವಿಚಾರಣೆ ಮತ್ತು ನಿರ್ಣಯಕ್ಕಾಗಿ, ಮ್ಯಾಜಿಸ್ಟ್ರೇಟರರು, ಸ್ಥಾನಿಕ ಕಾನೂನು ಅಧಿಕಾರಿಗಳಿಗೆ ಮತ್ತು ಸದರ ಅಮೀನರಿಗೆ ವಹಿಸಿಕೊಡುವ ಅಧಿಕಾರವನ್ನು ನೀಡಲಾಯಿತು. ಆದರಿಂದಾಗಿ ಅತ್ಯಂತ ಚಿಕ್ಕಪುಟ್ಟ ಪ್ರಕರಣಗಳನ್ನು ವಿಚಾರಿಸುವ ಪ್ರಯಾಸದಿಂದ ಮ್ಯಾಜಿಸ್ಟ್ರೇಟರಿಗೆ ವಿಮುಕ್ತಿಯು ದೊರಕಿತಲ್ಲದೆ, ಕ್ರಿಮಿನಲ್ ನ್ಯಾಯದಾನದಲ್ಲಿ ಸಾಕಷ್ಟು ತೀವ್ರತರವು ಕಂಡು ಬಂತು.

ii) ಕಂಪನಿಯ ನಿರ್ದೇಶಕ ಮಂಡಳಿಯ ನಿರ್ದೇಶನಕ್ಕನುಗುಣವಾಗಿ ಕಲೆಕ್ಟರರಿಗೆ ಮ್ಯಾಜಿಸ್ಟ್ರೇಟರ ಅಧಿಕಾರವನ್ನು ನೀಡಲಾಯಿತು.

iii) ನ್ಯಾಯಾಲಯಗಳಲ್ಲಿಯ ಪ್ರಕರಣಗಳ ಸಂಖ್ಯೆಯನ್ನು ಕಡಿಮೆ ಗೊಳಿಸಲು ಸಹಾಯಕ ಮ್ಯಾಜಿಸ್ಟ್ರೇಟರ ಪ್ರಾಧಿಕಾರವನ್ನು ಹೆಚ್ಚಿಸಲಾಯಿತು.

## 9. ಲಾರ್ಡ ವಿಲಿಯಮ್ ಬೆಂಟಿಂಕ್‌ನ ನ್ಯಾಯಿಕ ಸುಧಾರಣೆಗಳು (Judicial Reforms by Lord Willium Bentink)

1828 ರ ಜುಲೈ ತಿಂಗಳಲ್ಲಿ ಗವರ್ನರ ಜನರಲ್ ಆಗಿ ಭಾರತಕ್ಕೆ ಬಂದ ಲಾರ್ಡ ವಿಲಿಯಮ್ ಬೆಂಟಿಂಕನು 1935 ರ ವರೆಗೂ ಈ ಹುದ್ದೆಯಲ್ಲಿದ್ದು ಅನೇಕ ನ್ಯಾಯಿಕ ಸುಧಾರಣೆಗಳನ್ನು ಮಾಡಿದನು. ಅವನ ಈ ಕಾಲವನ್ನು ಭಾರತೀಯ ಕಾನೂನು ಇತಿಹಾಸದಲ್ಲಿ ಹೊಸಯುಗವು ಆರಂಭವಾದುದು ತಿಳಿಯ ಲಾಗುತ್ತದೆ. ಅವನು ತನ್ನ ಅಧಿಕಾರ ವಹಿಸಿಕೊಂಡಡನೆಯೇ, ಭಾರತದಲ್ಲಿಯ ನ್ಯಾಯದಾನ ಪದ್ಧತಿಯನ್ನು ಸೂಕ್ಷ್ಮವಾಗಿ ಅಭ್ಯಸಿಸಿದನಲ್ಲದೆ, ಅವಶ್ಯ ಕಂಡ ಅನೇಕ ಬದಲಾವಣೆಗಳನ್ನು ಜಾರಿಯಲ್ಲಿ ತಂದನು.

### (i) ಕ್ರಿಮಿನಲ್ ನ್ಯಾಯದಾನದಲ್ಲಿ ಸುಧಾರಣೆಗಳು (Reforms in the Criminal administration of Justice)

ಕಾರ್ನವಾಲೀಸನ ಕ್ರಿಮಿನಲ್ ನ್ಯಾಯಿಕ ಪದ್ಧತಿಯು ಕಾಲಕಾಲಕ್ಕೆ ಹಲವಾರು ಬದಲಾವಣೆ ಒಳಪಟ್ಟರೂ, ಸಂಪೂರ್ಣವಾಗಿ ತೃಪ್ತಿಕರವೆಂದು ಕಂಡು ಬರಲಿಲ್ಲ. ಮೊಫ್ಯುಸಿಲ್ ಫೌಜದಾರೀ ಅದಾಲತಗಳನ್ನು ತೊಡೆದು ಹಾಕಿ ಅವು ಗಳ ಸ್ಥಾನದಲ್ಲಿ ಅಸ್ತಿತ್ವದಲ್ಲಿ ತಂದ ನಾಲ್ಕು ವಲಯ ನ್ಯಾಯಾಲಯಗಳು, ಅವುಗಳ ಕಾರ್ಯ ಕ್ಷೇತ್ರದ ವಿಶಾಲತೆಯಿಂದಾಗಿ, ಸಮರ್ಪಕವಾಗಿ ಕಾರ್ಯ ನಿರ್ವಹಿಸಿ ದಂತಾದವು. ಈ ನ್ಯಾಯಾಲಯಗಳು ಜಿಲ್ಲೆಯಿಂದ ಜಿಲ್ಲೆಗೆ ತಿರುಗಾಡಬೇಕಾಗಿರು ವುದರಿಂದ ಪ್ರತಿ 6 ತಿಂಗಳಿಗೊಮ್ಮೆ ಸಭೆ ಸೇರುವುದು ಅಸಂಭವವೆಂದೆನ್ನಿಸಿತು. ಇದರಿಂದಾಗಿ, ಅಪರಾಧಿಗಳು ಹೆಚ್ಚುವರಿ ಸಮಯದ ವರೆಗೆ ಪೋಲೀಸ ಅಥವಾ ನ್ಯಾಯಾಲಯದ ಸೆರೆಯಲ್ಲಿ ಬಂಧಿಯಾಗಿರಬೇಕಾಗುತ್ತಿತ್ತು. ಕೆಲವೊಮ್ಮೆ ವಿಚಾ

ರಣಾ ಪೂರ್ವದ ಬಂಧನದ ಅವಧಿಯು ಅವರ ಶಿಕ್ಷೆಯ ಅವಧಿಗಿಂಥಲೂ ಹೆಚ್ಚಿನ ದಾಗಿರುತ್ತಿತ್ತು. ಇದಕ್ಕೆ ಹೊರತಾಗಿ ಎಷ್ಟೋ ಸಲ ಪ್ರಕರಣವನ್ನು ಸದರ ನಿಝಾಮತ ಅದಾಲತಕ್ಕೆ ಅದರ ಅಭಿಪ್ರಾಯ ಕೋರಬೇಕಾಗುತ್ತಿತ್ತು. ಅದ ರಿಂದಾಗಿ ಅನವಶ್ಯಕ ವಿಳಂಬ ಉಂಟಾಗುತ್ತಿತ್ತು. ಇವೆಲ್ಲ ನ್ಯೂನತೆಗಳನ್ನು ತೊಡೆದುಹಾಕಲು ಬೆಂಟಿಂಕ್‌ನು ಈ ಕೆಳಗಿನ ಸುಧಾರಣೆಗಳನ್ನು ಜಾರಿಯಲ್ಲಿ ತಂದನು.

ಇಡೀ ಬಂಗಾಲ ರಾಜ್ಯಪ್ರದೇಶವನ್ನು 20 ವಿಭಾಗಗಳನ್ನಾಗಿ ಪರಿವರ್ತಿಸಿದನು. ಪ್ರತಿಯೊಂದು ವಿಭಾಗಕ್ಕೆ ಒಬ್ಬ ಕಮೀಶನರನನ್ನು ನಿಯಮಿಸಲಾಯಿತು. ಈ ಕಮೀಶನರನಿಗೆ ಆ ಮೊದಲಿನ ವಲಯ ನ್ಯಾಯಾಲಯದ ನ್ಯಾಯಾಧೀಶನ ಎಲ್ಲ ಅಧಿ ಕಾರಗಳನ್ನು ನೀಡಲಾಯಿತು. ಈ ಕಮೀಶನರರು ನ್ಯಾಯಿಕ ಕಾರ್ಯ ನಿರ್ವಹಣೆ ಯಲ್ಲಿ ಸದರ ನಿಝಾಮತ ಅದಾಲತದ ಮೇಲ್ವಿಚಾರಣಾ ಅಧಿಕಾರಕ್ಕೆ ಬದ್ಧವಾಗಿರ ಬೇಕಾಗುತ್ತಿತ್ತು; ಮತ್ತು ಕಂದಾಯ ಪ್ರಕರಣದಲ್ಲಿ ಕಂದಾಯ ಮಂಡಳಿಯ ಅಧಿ ಕಾರಕ್ಕೆ ಬದ್ಧರಾಗಿರಬೇಕಾಗುತ್ತಿತ್ತು. ಇದು ಕಾರ್ನವಾಲೀಸನ ನ್ಯಾಯಿಕ ಪದ್ಧತಿಯ ತದ್ವಿರುದ್ಧ ಪದ್ಧತಿಯಾಗಿತ್ತು. ಈ ರೀತಿಯಾಗಿ ಬೆಂಟಿಂಕ್‌ನು ನ್ಯಾಯಿಕ ಮತ್ತು ಕಾರ್ಯನಿರ್ವಾಹಕ ಅಧಿಕಾರಗಳನ್ನು ಒಬ್ಬನೇ ವ್ಯಕ್ತಿಯಲ್ಲಿ ಕೇಂದ್ರೀಕರಿಸಿದನು.

ಬೆಂಟಿಂಕ್‌ನ ಸುಧಾರಣಾ ಪದ್ಧತಿಯು ನಿಜವಾಗಿಯೂ ಈ ಮೊದಲಿನ ನ್ಯಾಯದಾನ ಪದ್ಧತಿಗಿಂಥ ಹಲವು ಬಗೆಯಲ್ಲಿ ಪರಿಣಾಮಕಾರಿಯಾಗಿತ್ತಲ್ಲದೆ, ಕಮೀಶನರಿಗೆ ಅವರ ಪ್ರಾಧಿಕಾರಕ್ಕೊಳಪಟ್ಟ ಕ್ಷೇತ್ರವು ಚಿಕ್ಕದಾಗಿರುವುದರಿಂದ, ಅವರು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುವಂಥಾಯಿತು. ಆದರೆ, ಅವರು ಮೂರು ರೀತಿಯ ಕಾರ್ಯ ನಿರ್ವಹಣೆಯ ಹೊಣೆ ಹೊತ್ತಿರುವುದರಿಂದ ಅವರ ಕಾರ್ಯಭಾರವು ಅತೀಯಾಯಿತು. ಅಂತೆಯೆ, 1831 ರಲ್ಲಿ, ರೆಗ್ಯುಲೇಶನ್ VII ಪಾಸುಮಾಡಿ ಕ್ರಿಮಿನಲ್ ಅಪರಾಧಗಳ ತೀವ್ರತರ ನಿರ್ಣಯಕ್ಕೆ ಅನೇಕ ಕ್ರಮಗಳನ್ನು ಕೈಕೊಳ್ಳಲಾಯಿತು. ಬೆಂಟಿಂಕ್‌ನು ಕಲೆಕ್ಟರ, ಮ್ಯಾಜಿಸ್ಟ್ರೇಟ ನ್ಯಾಯಾಲಯಗಳು ಪುನಃ ಪ್ರತಿಷ್ಠಾಪಿಸಿದನು. ಕಂದಾಯ ವಸೂಲಿ ಅಧಿಕಾರ ಹೊಂದಿದ ಕಲೆಕ್ಟರನು ಅದರಿಂದ ಉದ್ಭವಿಸಬಹುದಾದ ವ್ಯಾಜ್ಯಗಳ ನಿರ್ಣಯವನ್ನು ಮಾಡುವಂತಾಗುವಂತಾಯಿತು. ಇದು ನೈಸರ್ಗಿಕ ನ್ಯಾಯಪದ್ಧತಿಗೆ ವ್ಯತಿರಿಕ್ತ ಕ್ರಮವಾಗಿ ಪರಿಣಮಿಸಿತು.

### (ii) ದೀವಾಣೀ ನ್ಯಾಯದಾನದಲ್ಲಿ ಸುಧಾರಣೆಗಳು (Reforms in the civil administration of justice)

ಕಾರ್ನವಾಲೀಸನ ನ್ಯಾಯಿಕ ಸುಧಾರಣಾ ಪದ್ಧತಿಯಲ್ಲಿ ಸ್ಥಾನಿಕ ಭಾರತೀಯ ರನ್ನು ಆಡಳಿತದಲ್ಲಾಗಲೀ, ನ್ಯಾಯದಾನದಲ್ಲಾಗಲೀ ಸೇರಿಸಿಕೊಳ್ಳಲಾಗಿರಲಿಲ್ಲ. ಅದರಿಂದಾಗಿ ಅವರಲ್ಲಿ ಒಂದು ಬಗೆಯ ತಾತ್ಸಾರ ಮನೋಭಾವನೆ ಮತ್ತು ಅಸಂತೋಷ ಉಂಟಾಗಿತ್ತು. ಬೆಂಟಿಂಕ್‌ನು ಈ ವಿಷಯವನ್ನು ಸೂಕ್ಷ್ಮವಾಗಿ ಗ್ರಹಿಸಿದನಲ್ಲದೆ, ಭಾರತೀಯರನ್ನು ಹೆಚ್ಚು ಹೆಚ್ಚಾಗಿ ನ್ಯಾಯದಾನ ಕಾರ್ಯದಲ್ಲಿ ಭಾಗವಹಿಸುವಂತೆ ಪ್ರೇರೇಪಿಸುವ ಕ್ರಮ ಕೈಕೊಂಡನು.

ಸಾಧ್ಯವಾದಷ್ಟು ಪ್ರಮಾಣದಲ್ಲಿ ಭಾರತೀಯ ನ್ಯಾಯಾಧೀಶರ ನೇಮಕಾತಿಯನ್ನು ಮಾಡಿದನು. ಇದರಿಂದಾಗಿ, ಸ್ಥಾನಿಕ ಭಾಷೆಯನ್ನು ಅರಿತುಕೊಂಡ ಭಾರತೀಯ ನ್ಯಾಯಾಧೀಶರು ಹೆಚ್ಚಿನ ದಕ್ಷತೆಯಿಂದ ಮತ್ತು ತೀವ್ರಗತಿಯಿಂದ ನ್ಯಾಯ ನಿರ್ಣಯ ಮಾಡುವಂತಾದರು. ಪ್ರಾಮುಖ್ಯವಾಗಿ ಮುನ್ಸೀಫ್‌ರ ನೇಮಕಾತಿಯಲ್ಲಿ ಹೆಚ್ಚು ಹೆಚ್ಚಾಗಿ ಭಾರತೀಯರನ್ನು ಸೇರ್ಪಡೆ ಮಾಡಿದನು, ಗವ್ಹರ್ನರ ಜನರಲ್ ಮಂತ್ರಾಲೋಚನ ಸಭೆಯಿಂದ ನಿಗದಿತಗೊಳಿಸಲಾದ ಮೊತ್ತವನ್ನು ಅವರು ಪಡೆದುಕೊಳ್ಳುವಂತೆ ಆದೇಶಿಸಲಾಯಿತು. ಅದರಿಂದಾಗಿ, ಅವರು ತಮ್ಮ ಸಂಬಳಕ್ಕಾಗಿ ಕೋರ್ಟ ಫೀಯನ್ನು ಅವಲಂಬಿಸಬೇಕಾದ ತೊಂದರೆಯನ್ನು ಪರಿಹರಿಸಿದಂತಾಯಿತು. ಸದರ ಅಮೀನರ ಸಂಖ್ಯೆಯನ್ನು ಹೆಚ್ಚಿಸಲಾಯಿತಲ್ಲದೆ, ಅವರ ಮೌಲ್ಯ ಪ್ರಾಧಿಕಾರವನ್ನು ಒಂದು ಸಾವಿರ ರೂಪಾಯಿಗಳ ವರೆಗೆ ಹೆಚ್ಚಿಸಲಾಯಿತು. ಬೆಂಟಿಂಕನು ಇನ್ನೊಂದು ಹುದ್ದೆಯನ್ನು ಸೃಷ್ಟಿಸಿದನು. ಅದು ಪ್ರಾಮುಖ್ಯ ಸದರ ಅಮೀನ ಎಂಬುದಾಗಿತ್ತು. ಈ ನ್ಯಾಯಾಧೀಶರ ಮೌಲ್ಯ ಪ್ರಾಧಿಕಾರವು 5000 ರೂಪಾಯಿಗಳಿಗೆ ಸೀಮಿತಗೊಂಡಿತ್ತು. ಈ ನ್ಯಾಯಾಲಯಗಳು ಜಿಲ್ಲಾ ದೀವಾಣೀ ಅದಾಲತ ಪ್ರಾಧಿಕಾರಕ್ಕೆ ಒಳಪಟ್ಟವರಾಗಿರುತ್ತಿದ್ದರು. ನ್ಯಾಯದಾನ ಆಡಳಿತ ಪದ್ಧತಿಯಲ್ಲಿ ಭಾರತೀಯರನ್ನು ಸೇರ್ಪಡೆ ಮಾಡುವ ಸಲುವಾಗಿ ಬೆಂಟಿಂಕ್‌ನು ಹಲವಾರು ಕ್ರಮಗಳನ್ನು ಕೈಕೊಂಡಾಗ್ಯೂ ಈ ಪದ್ಧತಿಯು ಹಲವಾರು ನ್ಯೂನತೆಗಳನ್ನು ಒಳಗೊಂಡಿತ್ತು.

i) ಭಾರತೀಯ ನ್ಯಾಯಾಧೀಶನ ಮೌಲ್ಯ ಪ್ರಾಧಿಕಾರವನ್ನು ನಿಗದಿತಗೊಳಿಸುವುದರಿಂದಾಗಿ, ಅದಕ್ಕೆ ಮೇಲ್ಪಟ್ಟ ಮೌಲ್ಯದ ವ್ಯಾಜ್ಯಗಳನ್ನು ನಿರ್ಣಯಿಸಿದಂತಾಯಿತು.

ii) ಭಾರತೀಯ ನ್ಯಾಯಾಧೀಶರಿಗೆ ಪ್ರಕರಣಗಳು ವಿಚಾರಿಸುವ ನೇರ ಪ್ರಾಧಿಕಾರವಿರಲಿಲ್ಲ. ಕೇವಲ ಜಿಲ್ಲಾ ನ್ಯಾಯಾಧೀಶರಿಂದ ಪ್ರಕರಣಗಳನ್ನು ಈ ನ್ಯಾಯಾಲಯಕ್ಕೆ ಕಳುಹಿಸಿದಾಗ ಮಾತ್ರ ಅವರು ಪ್ರಾಧಿಕಾರವನ್ನು ಪಡೆದುಕೊಳ್ಳುತ್ತಿದ್ದರು.

iii) ಬ್ರಿಟಿಶ್ ಮತ್ತು ಅಮೇರಿಕಾ ದೇಶದ ಪ್ರಜೆಗಳು ಭಾರತೀಯ ನ್ಯಾಯಾಧೀಶರ ಪ್ರಾಧಿಕಾರಕ್ಕೊಳಪಟ್ಟಿರಲಿಲ್ಲ.

iv) ಭಾರತೀಯ ನ್ಯಾಯಾಧೀಶರ ಯಾವ ನಿರ್ಣಯವೂ ಅಂತಿಮ ನಿರ್ಣಯವಾಗಿರುತ್ತಿರಲಿಲ್ಲ. ಅದು ಬ್ರಿಟಿಶ ನ್ಯಾಯಾಧೀಶ್ ಮೇಲ್ಮನವಿ ಪ್ರಾಧಿಕಾರಕ್ಕೆ ಒಳಪಟ್ಟಿದ್ದಾಗಿರುತ್ತಿತ್ತು.

ಈ ಎಲ್ಲ ನ್ಯೂನತೆಗಳನ್ನು ಹೊಂದಿದಾಗ್ಯೂ ನ್ಯಾಯದಾನ ಆಡಳಿತದಲ್ಲಿ ಭಾರತೀಯರ ಸೇರ್ಪಡೆಯು ಎಲ್ಲರ ಮೆಚ್ಚುಗೆ ಗಳಿಸಿತು.

ನ್ಯಾಯದಾನ ಪದ್ಧತಿಯನ್ನು ತೀವ್ರಗೊಳಿಸುವ ಉದ್ದೇಶದಿಂದ ಬೆಂಟಿಂಕನು ಮೊಟ್ಟ ಮೊದಲ ಬಾರಿಗೆ ಜ್ಯೂರಿ (ದ್ವಿಭಾಷಿಕ) ಪದ್ಧತಿಯನ್ನು ಜಾರಿಯಲ್ಲಿ

ತಂದನು. ಈ ದ್ವಿಭಾಷಿಕರು ಸ್ಥಾನಿಕ ಭಾರತೀಯರಾಗಿದ್ದು ಒಳ್ಳೆಯ ಮನೆತನಸ್ಥರೂ, ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿದವರೂ ಆಗಿರುತ್ತಿದ್ದರು. ಅವರು ಬ್ರಿಟಿಶ್ ನ್ಯಾಯಾಧೀಶರಿಗೆ ಸಾಕ್ಷಿದಾರರ ಭಾಷೆಯನ್ನು ಅವರಿಗೆ ಅರ್ಥವಾಗುವಂತೆ ತಿಳಿಹೇಳುವವರಾಗಿರುತ್ತಿದ್ದರು. ಅಂತೆಯೇ, ಅವರು ಸಾಕ್ಷಿಗಳ ಕುರಿತು ತಮ್ಮ ಅಭಿಪ್ರಾಯವನ್ನು ತಿಳಿಸುತ್ತಿದ್ದರೇ ವಿನಃ ಅದರ ನಿರ್ಣಯಗಾರರಾಗಿರುತ್ತಿರಲಿಲ್ಲ.

## 10. ರಾಜ ಸನ್ನದು ಕಾಯ್ದೆ 1833 ಮತ್ತು ಕಾನೂನು ಸಮಿತಿ (Charter Act of 1833 and Law Commission)

ದೇಶದಲ್ಲಿ ನ್ಯಾಯದಾನ ಪದ್ಧತಿಯು ಒಂದೇ ರೀತಿಯಲ್ಲಿರಲಿಲ್ಲ. ನಾಲ್ಕು ಸದರ ದೀವಾಣೀ ಅದಾಲತಗಳು ಮತ್ತು ಮೂರು ಸರ್ವೋಚ್ಚ ನ್ಯಾಯಾಲಯಗಳು ಒಂದಕ್ಕೊಂದು ಯಾವುದೇ ರೀತಿಯ ಹೊಂದಾಣಿಕೆ ಇಲ್ಲದೆ ಕಾರ್ಯಾಚರಣೆಯನ್ನು ಮಾಡುತ್ತಲಿದ್ದವು. ಈ ಉಚ್ಚ ನ್ಯಾಯಾಲಯಗಳು ತಮ್ಮದೇ ಆದ ರೀತಿಯಲ್ಲಿ ಕೆಳನ್ಯಾಯಾಲಯಗಳ ನ್ಯಾಯದಾನದಲ್ಲಿ ಹಸ್ತಕ್ಷೇಪ ಮಾಡಬಹುದಾದ ಅಧಿಕಾರವನ್ನು ಹೊಂದಿದ್ದವು. ಇವೆಲ್ಲವುಗಳ ಮಧ್ಯದಲ್ಲಿ ಪ್ರಕರಣ ಕಾನೂನು ಬೃಹದಾಕಾರವಾಗಿ ಬೆಳೆಯುತ್ತ ಒಂದಕ್ಕೊಂದು ವಿರೋಧಾಭಾಸದ ನಿಯಮಗಳನ್ನು ಜನತೆಯ ಮುಂದಿಡುವಂತಾಯಿತು.

ಇಂಗ್ಲಂಡದಲ್ಲಿ 19 ನೇ ಶತಮಾನವನ್ನು ಬೆಂಥಾಮ್ ಕಾಲವೆಂದು ಪರಿಗಣಿಸಲಾಗುವುದು. ಅವನು ಕಾನೂನು ಕ್ರೋಢೀಕರಣದ ಪ್ರಮುಖ ಪ್ರವರ್ತಕನಾಗಿದ್ದನು. 1833 ರಲ್ಲಿ ಬ್ರಿಟಿಶ್ ಸಂಸತ್ತಿನ ಗಮನವನ್ನು ಈ ವಿಷಯ ಕುರಿತು ಸೆಳೆಯಲಾಯಿತು. ಮೊದಲನೇಯದಾಗಿ, ಬ್ರಿಟಿಶ್ ಭಾರತದಲ್ಲಿ ಪ್ರಚಲಿತವಿದ್ದ ಕಾನೂನುಗಳ ಕಡೆಗೂ, ಎರಡನೇಯದಾಗಿ, ಸರಿಯಾದ ಅಧಿಕಾರ ಹೊಂದಿರದ ಪ್ರಾಧಿಕಾರದ ಮೂಲಕ ಹೊರಬಂದ ಕಾನೂನುಗಳ ಬಾಧ್ಯತಾ ಸಾಮರ್ಥ್ಯದ ಕುರಿತು, ಇದಲ್ಲದೆ ಭಿನ್ನಾಭಿಪ್ರಾಯ ಹೊಂದಿದ ಈ ಕಾನೂನುಗಳನ್ನು ನ್ಯಾಯದಾನದಲ್ಲಿ ಬೆಳೆಸುವುದರ ಕಡೆಗೂ ಗಮನ ಹರಿಸಲಾಯಿತು. ಈ ಅಸಂಬದ್ಧವಾದ ಕಾನೂನುಗಳಿಂದ ಭಾರತದ ಆಳಿಕೆಯಲ್ಲಿ ಅತ್ಯಂತ ತೊಂದರೆಯನ್ನು ಅನುಭವಿಸುತ್ತಿರುವ ವಿಷಯವು ಗಮನಕ್ಕೆ ಬಂತು. 1833 ರ ಜೂನ 13 ರಂದು ಈಸ್ಟ ಇಂಡಿಯಾ ಕಂಪನಿಯ ರಾಜ ಸನ್ನದನ್ನು ನವೀಕರಿಸುವ ಪ್ರಶ್ನೆ ಸಂಸತ್ತಿನ ಮುಂದೆ ಬರಲು ಅಲ್ಲಿ ಮಾಡಿದ ದೋಷಪೂರಿತ ಕಾನೂನು ಅವುಗಳ ಮೂಲಕ ನ್ಯಾಯದಾನದ ಕಾರ್ಯಾಚರಣೆಗಳು ಅಲ್ಲಿಯ ಅವ್ಯವಸ್ಥೆಗೆ ಪ್ರಮುಖ ಕಾರಣವೆಂದು ಪರಿಗಣಿಸಿ ಕಂಪನಿ ಸರಕಾರವು ಇದಕ್ಕೆ ಬಾಧ್ಯವೆಂದು ಪರಿಗಣಿಸಲಾಯಿತು. 1833 ರ ಜುಲೈ 10 ರಂದು ಸೇರಿದ ಸಾಮಾನ್ಯ ಸಭೆಯಲ್ಲಿ ಕಾನೂನು ಕ್ರೋಢೀಕರಣದ ಬಗ್ಗೆ ಲಾರ್ಡ ಮೆಕಾಲೆಯು ಎಲ್ಲರ ಗಮನವನ್ನು ಸೆಳೆದನು. ತತ್ಕಾಲದಲ್ಲಿ ಭಾರತದಲ್ಲಿ ಪ್ರಚಲಿತದಲ್ಲಿದ್ದ ಎಲ್ಲ ಕಾನೂನುಗಳನ್ನು ಸುವ್ಯವಸ್ಥಿತವಾಗಿ ಬರೆದು ಅವು

ಗಳನ್ನು ಸಾದರಪಡಿಸುವುದು ಇದರ ಪ್ರಮುಖ ಉದ್ದೇಶವಾಗಿದ್ದು ಅದು. ಇಂಗ್ಲಂಡ ದಲ್ಲಿಯ ಕಾನೂನು ಕ್ರೋಢೀಕರಣದಂತೆಯೇ ಆಗಿರಬೇಕೆಂಬುದು ಅವನ ಇಚ್ಛೆ ಯಾಗಿತ್ತು. ಭಾರತದಲ್ಲಿ ಹಲವಾರು ರಾಜ ಮಹಾರಾಜರ ಆಳಿಕೆ, ಅನೇಕ ವಿಭಿನ್ನ ರೀತಿಯ ಧರ್ಮಗಳ ಆಚರಣೆ ಅವರವರ ಸಂಸ್ಕೃತಿಗಳ ಆಧಾರದ ಮೇಲೆ ಪ್ರಚಲಿತ ದಲ್ಲಿದ್ದ ರೂಢಿಗತ ಕಾನೂನು ಇತ್ಯಾದಿಗಳು ಕಾನೂನು ಕ್ರೋಢೀಕರಣಕ್ಕೆ ಅತ್ಯಂತ ಕಠಿಣವಾದ ಸಮಸ್ಯೆಯಾಗಿತ್ತು. ರಾಜ ಸನ್ನದ ಕಾಯ್ದೆ, 1833 ಈ ಪ್ರಮುಖ ಕಾರ್ಯದಲ್ಲಿ ಅತ್ಯಂತ ಮಹತ್ವದ ಘಟ್ಟವೆಂದು ಪರಿಗಣಿಸಬಹುದು.

## ರಾಜ ಸನ್ನದ ಕಾಯ್ದೆ, 1833 ರ ನಿಯಮಾವಳಿಗಳು
## (Provisions of the Charter Act of 1833)

ಈ ಕಾಯ್ದೆಯು, ಭಾರತೀಯ ಸರಕಾರದ ಕಾನೂನು ರಚನೆಯ ಅಧಿಕಾರ ವನ್ನು ಸಂಪೂರ್ಣವಾಗಿ ಭಾರತದಲ್ಲಿಯ ಬ್ರಿಟಿಶ್ ಪ್ರತಿನಿಧಿಯಾದ ಗವ್ಹರ್ನರ ಜನರಲ್‌ನಿಗೆ ವಹಿಸಿಕೊಡಲಾಯಿತು. ಈ ಸಮಿತಿಯಲ್ಲಿ ಇನ್ನೂ ನಾಲ್ಕು ಜನ ಸದಸ್ಯರನ್ನು ಕೂಡಿಸಿಕೊಳ್ಳಲಾಯಿತು. ಅವರಿಗೆ ಕಾನೂನು ಸದಸ್ಯರೆಂದು ಕರೆಯಲಾಯಿತು. ಅವರು ಕೇವಲ ಕಂಪನಿಯ ಸೇವಕರಲ್ಲ. ಅವರ ಪ್ರಾಮುಖ್ಯ ಕಾರ್ಯವು ಭಾರತಕ್ಕೆ ಅವಶ್ಯವಾದ ಕಾನೂನುಗಳನ್ನು ಸೃಷ್ಟಿಸುವುದು. ಈ ಸಮಿತಿಯ ನಿರ್ಮಾಣದಿಂದಾಗಿ, ಮುಂಬಯಿ ಮದ್ರಾಸಗಳಲ್ಲಿಯ ಸರಕಾರಗಳು ತಮ್ಮ ಕಾನೂನು ನಿರ್ಮಾಣ ಸಾಮರ್ಥ್ಯವನ್ನು ಕಳೆದುಕೊಂಡರು. ಇನ್ನುಳಿದ ಪ್ರತಿನಿಧಿ ಸ್ವರೂಪ ಸರಕಾರಗಳು ಅವಶ್ಯಕತೆಗನುಸರಿಸಿ ಬೇಕಾದ ನಿಯಮಾವಳಿ ಗಳ ಕರಡು ಪ್ರತಿಯನ್ನು ತಯಾರಿಸಿ ಗವ್ಹರ್ನರ ಜನರಲ್‌ನ ಅವಗಾಹನೆಗಾಗಿ ಮುಂದಿಡಬಹುದಾಗಿತ್ತು.

ಗವ್ಹರ್ನರ ಜನರಲ್‌ನು ಈ ಕೆಳಗಿನ ವಿಷಯಗಳನ್ನು ಕುರಿತು ಕಾನೂನು ರಚಿಸಬಹುದಾದ ಅಧಿಕಾರವನ್ನು ಹೊಂದಿದ್ದನು.

a) ಆ ಪೂರ್ವದ ಮತ್ತು ಆ ನಂತರದಲ್ಲಿ ಅಸ್ತಿತ್ವದಲ್ಲಿರುವ ಮತ್ತು ಅಸ್ತಿತ್ವದಲ್ಲಿರಬಹುದಾದ ಯಾವುದೇ ಕಾನೂನಿನಲ್ಲಿ ಅಥವಾ ನಿಯಮಾವಳಿಯಲ್ಲಿ ತಿದ್ದುಪಡಿ ಮಾಡುವ, ರದ್ದುಪಡಿಸುವ ಅಥವಾ ಅದನ್ನು ಸ್ಥಗಿತಗೊಳಿಸುವ ಯಾವುದೇ ಕಾನೂನನ್ನು ರಚಿಸುವ ಅಧಿಕಾರ.

b) ಬ್ರಿಟಿಶ್ ಪ್ರಜೆಗಳ ಅಥವಾ ಸ್ಥಾನಿಕ ಪ್ರಜೆಗಳ ಅಥವಾ ಇನ್ನಾವುದೇ ಪರದೇಶಿಗರ ಮತ್ತು ಎಲ್ಲ ನ್ಯಾಯಾಲಯಗಳ ಕುರಿತಾದ ನಿಯಮಗಳನ್ನು ನಿರೂಪಿಸುವ ಅಧಿಕಾರ.

c) ಕಂಪನಿ ಸರಕಾರದ ಸೇವೆಯಲ್ಲಿರುವ ಎಲ್ಲ ಸೇವಕರ ಕುರಿತಾದ ನಿಯಮಾವಳಿಗಳನ್ನು ನಿರೂಪಿಸುವುದು.

d) ಯುದ್ಧ ಸಂಬಂಧೀ ವಸ್ತುಗಳ ಕುರಿತು ನಿಯಮಗಳನ್ನು ನಿರೂ ಪಿಸುವುದು.

ಈ ಮೇಲಿನಂತೆ ನಿರೂಪಿಸಲಾದ ನಿಯಮಗಳು ಭಾರತದ ಎಲ್ಲ ಪ್ರದೇಶಕ್ಕೂ ಅನ್ವಯವಾಗುವ ಅಧಿಕಾರವನ್ನು ಹೊಂದಿರಲಾಗುತ್ತಿತ್ತು.

ಆದರೆ, ಗವರ್ನರ ಜನರಲ್‌ನಿಗೆ ಈ ಕೆಳಗಿನ ವಿಷಯಕ್ಕೆ ಸಂಬಂಧಿಸಿದ ವಸ್ತುಗಳ ಕುರಿತು ಅವನಿಗೆ ಕಾನೂನು ರಚಿಸುವ ಅಧಿಕಾರವಿರಲಿಲ್ಲ.

i) ಸ್ಥಾನಿಕ ಪ್ರಜೆಗಳು ಬ್ರಿಟಿಶ್ ಸಾಮ್ರಾಜ್ಯದ ವಿರುದ್ಧ ದಂಗೆ ಎದ್ದರೆ, ಆದನ್ನು ಹತ್ತಿಕ್ಕಬಹುದಾದ ಕಾನೂನು ನಿಯಮಾವಳಿಗಳು.

ii) ಬ್ರಿಟಿಶ್ ರಾಜ ಮತ್ತು ರಾಣಿಯರ ವಿಶೇಷ ಅಧಿಕಾರದ ಕಕ್ಷೆಯಲ್ಲಿ ಬರುವ ಅಥವಾ ಬ್ರಿಟಿಶ್ ಸಂಸತ್ತಿನ ಕಾನೂನು ರಚಿಸುವ ಅಧಿಕಾರಕ್ಕೆ ಅನುಗುಣವಾಗಿ ಮಾಡಲಾಗುವ ವಿಷಯಗಳು ಕುರಿತು.

iii) ಬ್ರಿಟಿಶ್ ಪ್ರಜೆಗಳ ಮರಣ ದಂಡನೆಯನ್ನು ಬ್ರಿಟಿಶ್ ರಾಜನ ಅಪ್ಪಣೆ ಇಲ್ಲದೆ ಜಾರಿಗೊಳಿಸಬಹುದಾದ ಅಧಿಕಾರಕ್ಕೆ ಸಂಬಂಧಪಟ್ಟ ನಿಯಮಗಳ ಕುರಿತು.

ಇಷ್ಟೆಲ್ಲ ಅಧಿಕಾರಗಳನ್ನು ಗವ್ಹರ್ನರ ಜನರಲ್‌ನು ಪಡೆದುಕೊಂಡಾಗ್ಯೂ ಅವುಗಳನ್ನು ಶೂನ್ಯಗೊಳಿಸಬಹುದಾದ ಅಧಿಕಾರವು ಬ್ರಿಟಿಶ್ ಪಾರ್ಲಿಮೆಂಟಿಗೆ ಮೀಸಲಾಗಿತ್ತು. ಆದಕ್ಕಾಗಿ ಭಾರತದಲ್ಲಿ ಪಾಸುಮಾಡಲಾದ ಪ್ರತಿಯೊಂದು ಕಾನೂನನ್ನು ಬ್ರಿಟಿಶ್ ಪಾರ್ಲಿಮೆಂಟಿನ ಮುಂದಿಡಲಾಗುತ್ತಿತ್ತು.

**ಕ್ರೋಢೀಕರಣದ ನಿಯಮಗಳು (Provisions for Codification)**

1833 ರ ರಾಜಸನ್ನದು ಕಾಯ್ದೆಯ 53ನೇ ಕಲಮು ಭಾರತದಲ್ಲಿ ಪ್ರಚಲಿತದಲ್ಲಿದ್ದ ಎಲ್ಲ ಕಾನೂನುಗಳ ಕ್ರೋಢೀಕರಣದ ಅವಶ್ಯಕತೆಯನ್ನು ಒತ್ತಿ ಹೇಳುತ್ತದೆ. ಆದಕ್ಕಾಗಿ ಕಾನೂನು ಸಮಿತಿಯನ್ನು ನಿರ್ಮಿಸಿ ಕಾರ್ಯವನ್ನು ಅದಕ್ಕೆ ವಹಿಸಿಕೊಡಬೇಕೆಂದು ಸೂಚಿಸುತ್ತದೆ. ಈ ಸಮಿತಿಯ ಸದಸ್ಯರನ್ನು ಗವ್ಹರ್ನರ ಜನರಲ್‌ನು ನಿಯಮಿಸಬಹುದಾಗಿದ್ದು ಇದಕ್ಕೆ ಭಾರತೀಯ ಕಾನೂನು ಸಮಿತಿ (Indian Law Commission) ಎಂದು ಕರೆಯಬೇಕೆಂಬುದನ್ನು ಸೂಚಿಸಲಾಯಿತು. ಈ ಕಾನೂನು ಸಮಿತಿಯು ಎಲ್ಲ ಪ್ರಕಾರದ ನ್ಯಾಯಾಲಯದ ಅಧಿಕಾರವ್ಯಾಪ್ತಿ, ಅವುಗಳ ಕಾರ್ಯ ವೈಖರಿ ಇತ್ಯಾದಿಗಳನ್ನು ಕುರಿತು ವಿಚಾರಿಸುವುದು. ಇದಲ್ಲದೆ, ದೀವಾಣೀ, ಕ್ರಿಮಿನಲ್ ಮತ್ತು ಪದ್ಧತೀ ಕಾನೂನುಗಳು ಯಾವ ರೀತಿಯಲ್ಲಿವೆ ಮತ್ತು ಅವುಗಳ ಬಾಧ್ಯತಾ ಸಾಮರ್ಥ್ಯದ ಬಗ್ಗೆ ಪರಾಮರ್ಶಿಸುವುದು. ಈ ರೀತಿಯಾದ ವಿಚಾರಣೆಯಿಂದ ಸಂಗ್ರಹಿಸಿದಂತಹ ಮಾಹಿತಿಯನ್ನು ಸಮಿತಿಯು ಗವ್ಹರ್ನರ ಜನರಲ್‌ನಿಗೆ ತಿಳಿಸುವುದು. ಯಾವುದೇ ಸಲಹೆ ಸೂಚನೆಗಳಿದ್ದರೆ ಅವುಗಳನ್ನು ವರದಿ ಮಾಡಿ ಸಂಸತ್ತಿನ ಮುಂದಿಡುವುದಕ್ಕೆ ಸಿಫಾರಸ್ಸು ಮಾಡುವುದು.

ಇದಲ್ಲದೆ, ತಮ್ಮ ನೇರ ಸ್ವಾಧೀನತೆಯಲ್ಲಿದ್ದ ಪ್ರದೇಶಗಳನ್ನು ಇನ್ನೂ 20 ವರ್ಷಕಾಲ ಕಂಪನಿ ಸರಕಾರವು ಇಟ್ಟುಕೊಳ್ಳಬಹುದಾದ ಅಧಿಕಾರವನ್ನು ನೀಡಲಾಯಿತು. ಆದರೆ ಇದು ಕಂಪನಿಯು ಬ್ರಿಟಿಶ್ ರಾಜನ ನ್ಯಾಸವಾಗಿ ಹಿಡಿದಿಟ್ಟು

ಹೊಂದಿರುವ ಹಾಗಿತ್ತು. ಕಂಪನಿಯು ತನ್ನ ವ್ಯಾಪಾರವನ್ನು ಸಮಗ್ರವಾಗಿ ಬಂದು ಮಾಡುವ ನಿರ್ದೇಶನವನ್ನು ನೀಡಲಾಯಿತು. ಈ ಕಾನೂನು ಗವರ್ನರ ಜನರಲ್‌ಗೆ ಅಧಿಕಾರವನ್ನು ನೀಡಿ ಭಾರತದಲ್ಲಿ ಗುಲಾಮಗಿರಿ ಪದ್ಧತಿಯನ್ನು ನಷ್ಟಗೊಳಿಸುವ ಕುರಿತು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿತು.

**ಮೊದಲನೇ ಕಾನೂನು ಸಮಿತಿ (First Law Commission)**

1833 ರ ರಾಜ ಸನ್ನದು ಕಾಯ್ದೆಯ ಅಧಿಕಾರದ ಮೂಲಕ 1834 ರಲ್ಲಿ ಮೊದಲನೇ ಭಾರತೀಯ ಕಾನೂನು ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯ ಚೇರಮನ್ನನಾಗಿ ಲಾರ್ಡ ಮೇಕಾಲೆಯನ್ನು ನಿಯಮಿಸಲಾಯಿತು. ಇನ್ನುಳಿದ ಸದಸ್ಯರು ಕಲಕತ್ತಾ, ಮದ್ರಾಸ ಮತ್ತು ಮುಂಬಯಿ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುತ್ತಲಿದ್ದ ನಾಗರಿಕ ಸೇವಾ ಸದಸ್ಯರಾಗಿದ್ದರು. ಸಮಿತಿಯು ಮೊಟ್ಟ ಮೊದಲಬಾರಿಗೆ 1834 ರಲ್ಲಿ ಸಮಾವೇಶಗೊಂಡಿತು. ಸಮಿತಿಯು ಭಾರತೀಯ ದಂಡ ಸಂಹಿತೆಯ ಕರಡು ಪ್ರತಿಯನ್ನು 2 ನೇ ಮೇ 1837 ರಲ್ಲಿ ಸಿದ್ಧಪಡಿಸಿ ಪ್ರಸ್ತುತ ಪಡಿಸಿತು. ಸಮಿತಿಯು ದೀವಾಣೀ ಕಾರ್ಯ ನಿರ್ವಹಣೆ ಕಾನೂನಿನಲ್ಲಿ ಹಲವಾರು ಬದಲಾವಣೆಗಳನ್ನು ಸೂಚಿಸಿತಲ್ಲದೆ, 1842 ರಲ್ಲಿ ಬ್ರಿಟಿಶ್ ಭಾರತದ ನಿರ್ಬಂಧನಾ ಕಾನೂನು ಕರಡು ಪ್ರತಿಗಳನ್ನು ತಯಾರಿಸಿತು. ಮೊದಲನೇ ಕಾನೂನು ಸಮಿತಿಯ ಚಟುವಟಿಕೆಯು ಲಾರ್ಡ ಮೆಕಾಲೆಯ ನಿರ್ಗಮನದೊಂದಿಗೆ ಕುಂಠಿತಗೊಂಡಿತು.

ಬ್ರಿಟೀಶ್ ಪ್ರಜೆಗಳು ಕೆಲವೊಂದು ಹಳ್ಳಿಗಳಲ್ಲಿ ವಾಸಿಸುತ್ತಿದ್ದು ಅವರ ವ್ಯಕ್ತಿಗತ ಸ್ಥಾನಮಾನವನ್ನು ನಿರ್ಧರಿಸುವ ಮತ್ತು ಅವರಿಗೆ ಅನ್ವಯಗೊಳಿಸಲಾಗುವ ಕಾನೂನುಗಳು ಎಷ್ಟೋ ವರ್ಷ ಕಾಲ ನಿರ್ಧರಿತವಾಗಿರಲಿಲ್ಲ. 1837 ರಲ್ಲಿ ಮೊದಲನೇ ಕಾನೂನು ಸಮಿತಿಯ ಗಮನವನ್ನು ಈ ವಿಷಯ ಕಡೆಗೆ ಕೇಂದ್ರೀಕರಿಸಲಾಯಿತು. ಅದರ ವಾದಿಯನ್ನು 1840 ರ ಅಕ್ಟೋಬರ ತಿಂಗಳ 31 ನೇ ತಾರೀಖಿನಂದು ಪ್ರಸ್ತುತಪಡಿಸಲಾಯಿತು. ಇದೇ ತಾಯ್ನಾಡ ಕಾನೂನು ಸಿದ್ಧಾಂತ (Lex Loci Report) ಸಮಿತಿಯು ತನ್ನ ವರದಿಯಲ್ಲಿ ಹಿಂದೂ ಮತ್ತು ಮುಸ್ಲೀಮ ಕಾನೂನು ತಾಯ್ನಾಡು ಕಾನೂನು ಎಂದೂ, ಅದನ್ನು ಬ್ರಿಟಿಶ್ ಪ್ರಜೆಗಳಿಗೆ ಅನ್ವಯಿಸಲಾಗುವುದಿಲ್ಲವೆಂದೂ ತಿಳಿಸಲಾಗಿತ್ತು. ಅದನ್ನು ಕೇವಲ ಹಿಂದೂ ಮತ್ತು ಮುಸ್ಲೀಮರಿಗೆ ಮಾತ್ರ ಅನ್ವಯಗೊಳಿಸಲಾಗುತ್ತಿತ್ತು.

ಕಾನೂನು ಸಮಿತಿಯ ವರದಿಯ ಅನುಷ್ಠಾನಗೊಳಿಸುವಿಕೆಯು ಅತ್ಯಂತ ತೊಂದರೆದಾಯಕವಾಗಿತ್ತು. ಸರಕಾರವು ಅದರ ವರದಿಗನುಸಾರವಾಗಿ ಯಾವುದೇ ಅವಸರದ ನಿರ್ಣಯ ಕೈಕೊಂಡು ಕಾನೂನು ರಚಿಸುವ ಗೊಡವೆಗೆ ಹೋಗಲಿಲ್ಲ. ಸಮಿತಿಯ ವರದಿಯನ್ನು ಹಲವಾರು ಕಾನೂನು ತಜ್ಞರ ಅಭಿಪ್ರಾಯಕ್ಕಾಗಿ ಮಂಡಿಸಲಾಯಿತು. ಅದು ಅನೇಕ ಬಗೆಯ ಟೀಕೆಗೆ ಗುರಿಯಾಯಿತು.

1853 ರ ರಾಜ ಸನ್ನದು ಕಾಯ್ದೆ (Charter Act, 1853) ಗನುಗುಣವಾಗಿ ಎರಡನೇ ಕಾನೂನು ಸಮಿತಿಯನ್ನು ನಿಯಮಿಸಲಾಯಿತು. ಅದು

ಸರ್ವೋಚ್ಚ ನ್ಯಾಯಾಲಯ ಮತ್ತು ಸದರ ದೀವಾಣೀ ಅದಾಲತಗಳನ್ನು ಒಂದು ಗೂಡಿಸುವ ವಿಚಾರವನ್ನು ಮಂಡಿಸಿತು. 1857 ರ ಭಾರತದ ಮೊದಲನೇ ಸ್ವಾತಂತ್ರ್ಯ ಸಂಗ್ರಾಮದ ನಂತರ 1858 ರಲ್ಲಿ ಬ್ರಿಟಿಶ್ ಸರಕಾರವು ಭಾರತ ಸರಕಾರವನ್ನು ತಾನೇ ವಹಿಸಿಕೊಂಡಿತು. ಅಲ್ಲಿಯವರೆಗೆ ಭಾರತದಲ್ಲಿ ಭಾರತೀಯ ಕಾನೂನುಗಳ ಕ್ರೋಢೀಕರಣ ಕಾರ್ಯವು ಬಹುಮುಖ್ಯವಾದ ಪ್ರಗತಿಯನ್ನು ಸಾಧಿಸಿತ್ತು. ಭಾರತೀಯ ದಂಡ ಸಂಹಿತೆ (Indian Penal Code) ಕ್ರಿಮಿನಲ್ ಪ್ರಕ್ರಿಯಾ ಸಂಹಿತೆ (Criminal Procedure Code) ಮತ್ತು ದೀವಾಣೀ ಪ್ರಕ್ರಿಯಾ ಸಂಹಿತೆ (Civil Procedure Code) ಇತ್ಯಾದಿಗಳ ಕ್ರೋಢೀಕರಣ ಕಾರ್ಯವು ಮುಗಿದು ಹೋಗಿತ್ತು. ಕೆಲವೊಂದು ಮೂಲಭೂತ ಕಾನೂನುಗಳ ಒಂದುಗೂಡಿಸುವಿಕೆಯಿಂದಾಗಿ, ಎರಡೂ ಪದ್ಧತಿಯ ನ್ಯಾಯಿಕ ಕಾನೂನುಗಳನ್ನು ಒಂದುಗೂಡಿಸುವುದಕ್ಕೆ ಹಾದಿಯಾಯಿತು. ಇದರ ಪರಿಣಾಮವಾಗಿ, ಭಾರತೀಯ ಉಚ್ಚ ನ್ಯಾಯಾಲಯ ಕಾಯ್ದೆ, 1861 ನ್ನು ಬ್ರಿಟಿಶ್ ಪಾರ್ಲಿಮೆಂಟು ಪಾಸುಮಾಡಿತು.

## 11. ಭಾರತೀಯ ಉಚ್ಚನ್ಯಾಯಾಲಯಗಳ ಕಾನೂನು 1861 (Indian High Ccurt Act, 1861)

1861 ರ ಭಾರತೀಯ ಉಚ್ಚನ್ಯಾಯಾಲಯಗಳ ಕಾನೂನು ಭಾರತದಲ್ಲಿ ಉಚ್ಚ ನ್ಯಾಯಾಲಯವನ್ನು ಸ್ಥಾಪಿಸಲಿಲ್ಲ. ಆದರೆ, ಉಚ್ಚ ನ್ಯಾಯಾಲಯವನ್ನು ಸ್ಥಾಪಿಸಬಹುದಾದ ಅಧಿಕಾರವನ್ನು ನೀಡಿತು. ಇಂಗ್ಲಂಡದ ಮಹಾರಾಣಿಗೆ, ಕಲಕತ್ತೆ, ಮದ್ರಾಸ ಮತ್ತು ಮುಂಬಯಿಗಳಲ್ಲಿ ಅಜ್ಞಾಪತ್ರವನ್ನು ನೀಡಿ ಉಚ್ಚ ನ್ಯಾಯಾಲಯ ಸ್ಥಾಪಿಸಲು ಅವಕಾಶ ಮಾಡಿಕೊಡಬಹುದಾದ ಅಧಿಕಾರವನ್ನು ನೀಡಿತು.

ಬ್ರಿಟಿಶ್ ಆಳಿಕೆಯ ಕಾಲದಲ್ಲಿ ಭಾರತದಲ್ಲಿ 1861 ರ ಪೂರ್ವದಲ್ಲಿ ಎರಡು ಬಗೆಯಾದ ಮತ್ತು ಒಂದಕ್ಕೊಂದು ವಿರುದ್ಧವಾದ ನ್ಯಾಯದಾನ ಪದ್ಧತಿಗಳು ಪ್ರಚಲಿತದಲ್ಲಿದ್ದವು. ಒಂದು ಬಗೆಯಾದ ನ್ಯಾಯದಾನವು ಪ್ರೆಸಿಡೆನ್ಸಿ ಪಟ್ಟಣಗಳಲ್ಲಿ ಜಾರಿಯಲ್ಲಿದ್ದು ಸಾರ್ವಭೌಮ ನ್ಯಾಯಾಲಯಗಳು ರಾಜ ಸನ್ನದು ಮೂಲಕ ಮತ್ತು ಪಾರ್ಲಿಮೆಂಟ ಕಾನೂನು ಮೂಲಕ ಅಸ್ತಿತ್ವದಲ್ಲಿದ್ದವುಗಳಾಗಿದ್ದವು. ಈ ನ್ಯಾಯಾಲಯಗಳ ನಿರ್ಣಯವನ್ನು ಸರ್ವೋಚ್ಚ ನ್ಯಾಯಾಲಯವು ಪರಿಶೀಲಿಸುವುದಾಗಿದ್ದೂ ಅದು ಇಂಗ್ಲಂಡದ ಪ್ರೀವ್ಹಿ ಕೌನ್ಸಿಲ್‌ದ ಆಜ್ಞಾಧೀನವಾಗಿತ್ತು. ಎರಡನೇ ಪ್ರಕಾರದ ಪದ್ಧತಿಯು ಇನ್ನಿತರ ಪಟ್ಟಣಗಳಲ್ಲಿ ಜಾರಿಯಲ್ಲಿದ್ದು, ಭಾರತೀಯ ಆಳರಸರಿಂದ ಅನುದಾನ ಪಡೆದುಕೊಂಡ ಅಧಿಕಾರದ ಮೇರೆಗೆ ಕಂಪನಿ ಸರಕಾರವು ಜಾರಿಗೊಳಿಸಿದ ಕಾನೂನಿನ ಅನ್ವಯವಾಗುತ್ತಲಿತ್ತು. ದೀವಾಣೀ ನ್ಯಾಯ ನಿರ್ಣಯಕ್ಕಾಗಿ ಸದರ ದೀವಾಣೀ ಅದಾಲತ ನ್ಯಾಯಾಲಯಗಳು ಕ್ರಿಮಿನಲ್ ನ್ಯಾಯ ವಿಚಾರಣೆಗಾಗಿ ಸದರ ನಿಝಾಮತ ಅದಾಲತ ನ್ಯಾಯಾಲಯಗಳೂ ಉಚ್ಚ ನ್ಯಾಯಾಲಯಗಳಾಗಿದ್ದೂ ಇಂಗ್ಲಂಡದ ಪ್ರೀವ್ಹಿಕೌನ್ಸಿಲವು ಇವುಗಳ ಮೇಲೆ ಮೇಲ್ಮನವಿ ವಿಚಾರಣೆ

ಅಧಿಕಾರವನ್ನು ಹೊಂದಿತ್ತು. ಸಾರ್ವಭೌಮ ನ್ಯಾಯಾಲಯಗಳು ರಾಜಸನ್ನದು ಮೂಲಕ ಮತ್ತು ಪಾರ್ಲಿಮೆಂಟ ಕಾನೂನು ಮೂಲಕ ಅಸ್ತಿತ್ವದಲ್ಲಿದ್ದವುಗಳಾಗಿದ್ದವು. ಈ ನ್ಯಾಯಾಲಯಗಳ ನಿರ್ಣಯವನ್ನು ಸರ್ವೋಚ್ಚ ನ್ಯಾಯಾಲಯವು ಪರಿಶೀಲಿಸುವುದಾಗಿದ್ದು ಅದು ಇಂಗ್ಲಂಡದ ಪ್ರೀವ್ಹಿ ಕೌನ್ಸಿಲ್‌ದ ಅಜ್ಞಾಧೀನವಾಗಿತ್ತು. ಎರಡನೇ ಪ್ರಕಾರದ ಪದ್ಧತಿಯು ಇನ್ನಿತರ ಪಟ್ಟಣಗಳಲ್ಲಿ ಜಾರಿಯಲ್ಲಿದ್ದು ಭಾರತೀಯ ಆಳರಸರಿಂದ ಅಸುದಾನ ಪಡೆದುಕೊಂಡ ಅಧಿಕಾರದ ಮೇರೆಗೆ ಕಂಪನಿ ಸರಕಾರವು ಜಾರಿಗೊಳಿಸಿದ ಕಾನೂನಿನ ಅನ್ವಯವಾಗುತ್ತಲಿತ್ತು. ದೀವಾಣೀ ನ್ಯಾಯ ನಿರ್ಣಯಕ್ಕಾಗಿ ಸದರ ದೀವಾಣೀ ಅದಾಲತ ನ್ಯಾಯಾಲಯಗಳು ಕ್ರಿಮಿನಲ್ ನ್ಯಾಯ ವಿಚಾರಣೆಗಾಗಿ ಸದರ ನಿಝಾಮತ ಅದಾಲತ ನ್ಯಾಯಾಲಯಗಳು ಉಚ್ಚ ನ್ಯಾಯಾಲಯಗಳಾಗಿದ್ದು ಇಂಗ್ಲಂಡದ ಪ್ರೀವ್ಹಿ ಕೌನ್ಸಿಲ್‌ವು ಇವುಗಳ ಮೇಲೆ ಮೇಲ್ಮನವಿ ವಿಚಾರಣೆಯ ಅಧಿಕಾರವನ್ನು ಹೊಂದಿತ್ತು. ಸಾರ್ವಭೌಮ ನ್ಯಾಯಾಲಯಗಳು ಇಂಗ್ಲೀಷ ಕಾನೂನುಗಳಿಗನುಸಾರವಾಗಿ ನ್ಯಾಯನಿರ್ಣಯ ನೀಡುತ್ತಿದ್ದರೆ, ಇನ್ನೂಳಿದ ನ್ಯಾಯಾಲಯಗಳಲ್ಲಿ ಹಿಂದೂ ಮುಸಲ್ಮಾನ ವೈಯಕ್ತಿಕ ಕಾನೂನನ್ನು ಆಧಾರವಾಗಿರಿಸಿ ಭಾರತೀಯ ಶಾಸನಕ್ಕನುಸಾರವಾಗಿ ನ್ಯಾಯ ನಿರ್ಣಯವನ್ನು ನೀಡಲಾಗುತ್ತಿತ್ತು.

ಈ ರೀತಿಯಾದ ಇಬ್ಬಗೆಯ ನ್ಯಾಯ ನಿರ್ಣಯವು ಅತ್ಯಂತ ದೋಷಪೂರಿತವಾಗಿತ್ತು. ಎರಡು ಬಗೆಯಾದ ನ್ಯಾಯಾಲಯವು ಭಿನ್ನ ಭಿನ್ನವಾದ ಕಾನೂನು ಮೂಲಗಳನ್ನು ಹೊಂದಿರುವದ್ದರಿಂದ ಒಂದೇ ವಿಷಯಕ್ಕೆ ಸಂಬಂಧಿಸಿದ ವಿಭಿನ್ನ ರೀತಿಯ ನಿರ್ಣಯಗಳಿಂದಾಗಿ ಭಾರತೀಯ ಜನತೆಯಲ್ಲಿ ಗೊಂದಲಮಯ ವಾತಾವರಣ ಉಂಟಾಗತೊಡಗಿತು. ಅಂತೆಯೇ, ಏಕರೂಪ ಪದ್ಧತಿಯ ನ್ಯಾಯಾಲಯಗಳ ಅಸ್ತಿತ್ವವು ಉತ್ತಮ ನ್ಯಾಯದಾನಕ್ಕೆ ಅವಶ್ಯವೆಂಬುದನ್ನು ಎಲ್ಲರೂ ಅರಿತುಕೊಂಡರು. ಅದಕ್ಕನುಗುಣವಾಗಿ, ಈ ಇಬ್ಬಗೆಯ ಪದ್ಧತಿಗಳನ್ನು ಒಂದುಗೂಡಿಸಿ ಒಂದೇ ಬಗೆಯಾದ ಕಾನೂನನ್ನು ಒಳಗೊಂಡಿರುವ ನ್ಯಾಯಾಲಯಗಳ ಸ್ಥಾಪನೆಗಾಗಿ ಪ್ರಯತ್ನಿಸಲಾಯಿತು. ಮೊದಲನೆಯ ಪ್ರಯತ್ನದ ಫಲವಾಗಿ, 1833 ರಲ್ಲಿ ನೀಡಲಾದ ರಾಜಸನ್ನದಕ್ಕನುಗುಣವಾಗಿ ಕೇಂದ್ರ ಕಾನೂನು ರಚನಾ ಅಧಿಕಾರವನ್ನು ಸ್ಥಾಪಿಸುವ ನಿರ್ಣಯ ಕೈಗೊಳ್ಳಲಾಯಿತು. ಕಂಪನಿಯ ಮತ್ತು ಸಾರ್ವಭೌಮ ನ್ಯಾಯಾಲಯಗಳೆಲ್ಲ ಈ ಅಧಿಕಾರಕ್ಕನುಗುಣವಾಗಿ ಪಾಸು ಮಾಡಲಾದ ಕಾನೂನು ನಿಯಮಗಳ ಮೂಲಕ ನ್ಯಾಯ ನಿರ್ಣಯ ನೀಡಬೇಕೆಂದು ನಿರ್ದೇಶಿಸಲಾಯಿತು. ಇದೇ ವರ್ಷ ಭಾರತೀಯ ಕಾನೂನುಗಳನ್ನು ಕ್ರೋಢೀಕರಿಸುವ ಕಾರ್ಯವನ್ನೂ ಪ್ರಾರಂಭಿಸಲಾಯಿತು. 1853 ರಲ್ಲಿ ಬ್ರಿಟಿಶ್ ಸರಕಾರವು ಒಂದು ರಾಜ ಸನ್ನದನ್ನು ನೀಡಿ ಇಬ್ಬಗೆಯ ನ್ಯಾಯ ಪದ್ಧತಿಗಳನ್ನು ಒಂದುಗೂಡಿಸುವ ಆಜ್ಞೆಯನ್ನು ಜಾರಿಗೊಳಿಸಲಾಯಿತು.

1858 ರಲ್ಲಿ ಈಸ್ಟ ಇಂಡಿಯಾ ಕಂಪನಿ ಸರಕಾರದ ಆಳಿಕೆಯನ್ನು ಕೊನೆಗೊಳಿಸಲಾಯಿತಲ್ಲದೆ, ಭಾರತೀಯ ಪ್ರಜೆಗಳು ಬ್ರಿಟಿಶ್ ಸಾರ್ವಭೌಮಕ್ಕೆ ನೇರ

ಬಾಧ್ಯತೆಯನ್ನು ಕಲ್ಪಿಸುವ ಭಾರತ ಸಾಮ್ರಾಜ್ಯವನ್ನು ಬ್ರಿಟಿಶ್ ಸಾಮ್ರಾಜ್ಯದಲ್ಲಿ ವಿಲೀನಗೊಳಿಸುವ ಕ್ರಮವು ಇಬ್ಬಗೆಯ ನ್ಯಾಯ ನಿರ್ಣಯ ಕ್ರಮವನ್ನು ಅಂತ್ಯಗೊಳಿಸಿ, ಅನೇಕ ಸಂಹಿತೆಯ ಪಾಸುಮಾಡುವುದಕ್ಕೆ ನಾಂದಿಯಾಯಿತು. 1861 ರಲ್ಲಿ ಮೊಟ್ಟ ಮೊದಲಬಾರಿಗೆ ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನನ್ನು ಪಾಸುಮಾಡಲಾಯಿತಲ್ಲದೆ ಸದರ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಗಳ ಕಾರ್ಯ ನಿರ್ವಹಣೆಯನ್ನು ಅಂತ್ಯಗೊಳಿಸಲಾಯಿತು.

ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನನ್ನು 6 ನೇ ಅಗಸ್ಟ 1861 ರಂದು ಪಾಸು ಮಾಡಲಾಯಿತು. ಇದು 19 ಕಲಮುಗಳನ್ನು ಒಳಗೊಂಡಿದೆ. 1 ನೇ ಕಲಮು ಬ್ರಿಟಿಶ್ ರಾಣಿಗೆ ಅಧಿಕಾರವನ್ನು ನೀಡಿ ಅದಕ್ಕನುಗುಣವಾಗಿ ಪೋರ್ಟ ವಿಲಿಯಮ್, ಮದ್ರಾಸ ಮತ್ತು ಮುಂಬಯಿಗಳಲ್ಲಿ ಉಚ್ಚ ನ್ಯಾಯಾಲಯಗಳನ್ನು ಸ್ಥಾಪಿಸಬಹುದಾದ ನಿರ್ದೇಶನವನ್ನು ನೀಡುವ ಅಧಿಕಾರವನ್ನು ನೀಡಲಾಯಿತು. ಈ ಉಚ್ಚ ನ್ಯಾಯಾಲಯಗಳ ಸ್ವರೂಪವು ಈ ಕೆಳಗಿನಂತಿತ್ತು.

### i) ಉಚ್ಚ ನ್ಯಾಯಾಲಯಗಳ ಸಂವಿಧಾನ (Constitution of High Courts)

ಪ್ರತಿಯೊಂದು ಉಚ್ಚ ನ್ಯಾಯಾಲಯವು ಒಬ್ಬ ಪ್ರಮುಖ ನ್ಯಾಯಾಧೀಶನನ್ನು ಹೊಂದಿರತಕ್ಕದ್ದು ಮತ್ತು ಇನ್ನಿತರ ನ್ಯಾಯಾಧೀಶರನ್ನೊಳಗೊಂಡು ಇವರ ಸಂಖ್ಯೆಯು 15 ಕ್ಕೆ ಮಿಕ್ಕಿರಕೂಡದು. ಅವರಲ್ಲಿಯ 1/3 ರಷ್ಟು ನ್ಯಾಯಾಧೀಶರು ಬ್ಯಾರಿಸ್ಟರ ಪದವಿಧರರಾಗಿರಬೇಕಲ್ಲದೆ 1/3 ರಷ್ಟು ಜನರು ಸರಕಾರೀ ನಾಗರಿಕ ಸೇವೆಯಲ್ಲಿ ಕಾರ್ಯಸಲ್ಲಿಸುವವರಾಗಿರಬೇಕು. ಈ ನ್ಯಾಯಾಧೀಶರ ನೇಮಕಾತಿಯು ಈ ಕೆಳಗೆ ಸೂಚಿಸಿದ ರೀತಿಯಲ್ಲಿ ಆಗಬೇಕು.

a) 5 ಅಥವಾ ಅದಕ್ಕೂ ಹೆಚ್ಚು ವರ್ಷ ಸೇವೆ ಸಲ್ಲಿಸಿದ ಬ್ಯಾರಿಸ್ಟರರು:

b) ಸಿವ್ಹಿಲ್ ಸೇವೆಯಲ್ಲಿದ್ದು ಮತ್ತು ಅತ್ಯಂತ ಉನ್ನತ ಸ್ಥಾನದಲ್ಲಿ 10 ವರ್ಷಗಳ ವರೆಗೆ ಸೇವೆ ಸಲ್ಲಿಸಿದ ಸರಕಾರೀ ಅಧಿಕಾರಿಗಳು ಮತ್ತು ಜಿಲ್ಲಾ ನ್ಯಾಯಾಧೀಶರಾಗಿ 3 ವರ್ಷಕಾಲ ಸೇವೆ ಸಲ್ಲಿಸಿದ ನಾಗರಿಕ ಅಧಿಕಾರಿಗಳು ,

c) ಪ್ರಮುಖ ಸದರ ಅಮೀನ ಅಥವಾ ಸ್ಮಾಲ ರಾಜ ಕೋರ್ಟ ನ್ಯಾಯಾಲಯಗಳ ನ್ಯಾಯಾಧೀಶಗಿಂಥ ಉನ್ನತ ನ್ಯಾಯಾಲಯಗಳಲ್ಲಿ 5 ವರ್ಷಕ್ಕಿಂಥ ಹೆಚ್ಚು ಸೇವೆ ಸಲ್ಲಿಸಿದ ನ್ಯಾಯಾಧೀಶರು;

d) ಸದರ ಕೋರ್ಟ ಅಥವಾ ಉಚ್ಚ ನ್ಯಾಯಾಲಯಗಳಲ್ಲಿ 10 ವರ್ಷಕ್ಕಿಂತ ಹೆಚ್ಚು ಕಾಲ ನ್ಯಾಯವಾದಿಗಳಾಗಿ ಕಾರ್ಯಮಾಡಿದ ನ್ಯಾಯವಾದಿಗಳು.

ಈ ಎಲ್ಲ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಬ್ರಿಟಿಶ್ ರಾಜ ಅಥವಾ ರಾಣಿಯ ಇಚ್ಛೆಯ ಮೇರೆಗೆ ಸೇವೆಯಲ್ಲಿ ಮುಂದುವರೆಯುತ್ತಿದ್ದರು.

ii) **ಅಧಿಕಾರವ್ಯಾಪ್ತಿ (Jurisdiction)**

ಪ್ರತಿಯೊಂದು ಉಚ್ಚ ನ್ಯಾಯಾಲಯವು ತನ್ನ ಪ್ರಾಧಿಕಾರ ವ್ಯಾಪ್ತಿಯಲ್ಲಿ ಬರುವ ಎಲ್ಲ ಪ್ರಕಾರದ ದೀವಾಣೀ, ಕ್ರಿಮಿನಲ್, ವೈವಾಹಿಕ ಜೀವನಕ್ಕೆ ಸಂಬಂಧಿಸಿದ, ವ್ಯಕ್ತಿಗತ ಹಸ್ತಾಂತರಣಕ್ಕೆ ಸಂಬಂಧಪಟ್ಟ ಎಲ್ಲ ಪ್ರಕಾರದ ಮೂಲ ಪ್ರಕರಣಗಳಿಗೆ ಮತ್ತು ಮೇಲ್ಮನವಿಯಾಗಿ ಸ್ವೀಕರಿಸಿದ ಪ್ರಕರಣಗಳನ್ನು ವಿಚಾರಿಸಿ ಇತ್ಯರ್ಥ ಪಡಿಸುವ ಅಧಿಕಾರವನ್ನು ಹೊಂದಿತ್ತು. ಇದಲ್ಲದೆ ಬ್ರಿಟಿಶ್ ರಾಜ ಅಥವಾ ರಾಣಿ ತನ್ನ ಆದೇಶದ ಮೂಲಕ ನಿರ್ದೇಶನ ನೀಡಿದ ಇನ್ನಿತರ ಎಲ್ಲ ಪ್ರಕಾರದ ಪ್ರಕರಣಗಳನ್ನು ವಿಚಾರಿಸಿ ಇತ್ಯರ್ಥ ಪಡಿಸುವ ಅಧಿಕಾರವನ್ನು ಹೊಂದಿತ್ತು. ಇದಲ್ಲದೆ ಬ್ರಿಟಿಶ್ ರಾಜ ಅಥವಾ ರಾಣಿ ತನ್ನ ಆದೇಶದ ಮೂಲಕ ನಿರ್ದೇಶನ ನೀಡಿದ ಇನ್ನಿತರ ಎಲ್ಲ ಪ್ರಕಾರದ ಪ್ರಕರಣಗಳನ್ನು ವಿಚಾರಿಸಿ ನಿರ್ಣಯಿಸುವ ಅಧಿಕಾರ ನೀಡಲಾಗಿತ್ತು. ಇದಲ್ಲದೆ ತನ್ನ ಕಕ್ಷೆಯಲ್ಲಿ ಬರುವ ಇನ್ನಿತರ ಎಲ್ಲ ಕೆಳ ನ್ಯಾಯಾಲಯಗಳ ಮೇಲ್ವಿಚಾರಣೆಯ ಅಧಿಕಾರವನ್ನು ನೀಡಲಾಗಿತ್ತು. ಬ್ರಿಟಿಶ್ ರಾಜ ಅಥವಾ ರಾಣಿಯು ಒಂದು ನ್ಯಾಯಾಲಯದ ಅಧಿಕಾರ ಕಕ್ಷೆಗೆ ಸೇರಿಸಬಹುದಾದ ಅಧಿಕಾರವನ್ನು ಹೊಂದಿರಲಾಗಿತ್ತು.

iii) **ಕೆಳನ್ಯಾಯಾಲಯದ ಕುರಿತಾದ ಉಚ್ಚನ್ಯಾಯಾಲಯದ ಅಧಿಕಾರ (Powers of the High courts with respect to Subordinate Courts)**

ಉಚ್ಚ ನ್ಯಾಯಾಲಯದ ಸಂವಿಧಾನದ 15 ನೇ ಕಲಮಿನ ಪ್ರಕಾರ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯ ವಿಚಾರಣೆ ಅಧಿಕಾರವಲ್ಲದೆ ಅದಕ್ಕೆ ತನ್ನ ಕಕ್ಷೆಯಲ್ಲಿ ಬರುವ ಇನ್ನಿತರ ಎಲ್ಲ ಕೆಳನ್ಯಾಯಾಲಯಗಳ ಮೇಲ್ವಿಚಾರಣೆ ಅಧಿಕಾರವನ್ನೂ ನೀಡಲಾಗಿತ್ತು. ಅದು ಯಾವುದೇ ದಾವೆಯನ್ನು ಮರುನಿರ್ಣಯಕ್ಕಾಗಿ ಆಜ್ಞಾಪಿಸುವ, ಒಂದು ನ್ಯಾಯಾಲಯದಿಂದ ಇನ್ನೊಂದು ನ್ಯಾಯಾಲಯಕ್ಕೆ ಪ್ರಕರಣಗಳನ್ನು ವರ್ಗಾಯಿಸುವ, ನ್ಯಾಯಾಲಯಗಳಲ್ಲಿ ಪಾಲಿಸಲಾಗುತ್ತಿರುವ ಕಾರ್ಯ ವ್ಯವಹರಣೆ ಕುರಿತು ನಿರ್ದೇಶನವನ್ನು ನೀಡುವ ಅಧಿಕಾರವನ್ನು ಹೊಂದಿತ್ತು.

iv) **ನ್ಯಾಯಾಲಯದ ನ್ಯಾಯಾಧೀಶರ ಪ್ರಮಾಣವನ್ನು ನಿರ್ಧರಿಸುವ ಅಧಿಕಾರ (Exercise of jurisdiction by single Judge or by Divisional Courts)**

ಉಚ್ಚ ನ್ಯಾಯಾಲಯದ ಪ್ರಕರಣ ವಿಚಾರಣೆ ಕಾಲಕ್ಕೆ ಅದು ಒಬ್ಬ ನ್ಯಾಯಾಧೀಶನನ್ನೊಳಗೊಳ್ಳಬೇಕೆ ? ಅಥವಾ ಹೆಚ್ಚು ನ್ಯಾಯಾಧೀಶರನ್ನು ಹೊಂದಿರಬೇಕೆ ? ಎಂಬುದನ್ನು ನಿರ್ಧರಿಸುವ ಹಕ್ಕು ಉಚ್ಚ ನ್ಯಾಯಾಲಯದ ಪ್ರಮುಖ ನ್ಯಾಯಾಧೀಶನಿಗೆ ಸೇರಿದ ವಿಷಯವಾಗಿತ್ತು. 1861 ರ ಉಚ್ಚ ನ್ಯಾಯಾಲಯ ಕಾನೂನಿಗನುಸಾರವಾಗಿ ಕಲಕತೆಯಲ್ಲಿ ಮೇ ತಿಂಗಳ 14 ರಂದು ಉಚ್ಚ ನ್ಯಾಯಾ

ಲಯವು ಅಸ್ತಿತ್ವದಲ್ಲಿ ಬಂತು. ಅದೇ ರೀತಿಯಾಗಿ 26 ನೇ ಜೂನ 1862 ರಂದು ಮುಂಬಯಿ, ಮತ್ತು ಮದ್ರಾಸಗಳಲ್ಲಿಯೂ ಉಚ್ಚ ನ್ಯಾಯಾಲಯಗಳನ್ನು ಪ್ರಾರಂಭಿಸಲಾಯಿತು. ಪ್ರತಿಯೊಂದೂ ಉಚ್ಚ ನ್ಯಾಯಾಲಯವು ತನ್ನದೇ ಆದ ಸ್ಥಾನಿಕ ಮತಗಳನ್ನು ಹೊಂದಿದ್ದು ಅಲ್ಲಿಯ ದೀವಾಣೀ ಮತ್ತು ಕ್ರಿಮಿನಲ್ ಪ್ರಕರಣಕ್ಕೆ ಸಂಬಂಧಪಟ್ಟ ಮೂಲ ಮತ್ತು ಮೇಲ್ಮನವಿ ಪ್ರಕರಣಗಳನ್ನು ನಿರ್ಣಯಿಸುವ ಅಧಿಕಾರವನ್ನು ಹೊಂದಿತ್ತು.

ಉಚ್ಚ ನ್ಯಾಯಾಲಯಗಳ ಸ್ಥಾಪನೆಯು ಸರ್ವೋಚ್ಚ ಮತ್ತು ಸದರ ನ್ಯಾಯಾಲಯಗಳ ಒಂದುಗೂಡಿಸುವ ದಿಟ್ಟ ಕ್ರಮವಾಗಿದ್ದರೂ ಅಂಥಹ ಹೇಳಿಕೊಳ್ಳುವ ಯಾವ ಮಹತ್ವದ ಬದಲಾವಣೆ ಕಂಡು ಬರಲಿಲ್ಲ.

1861 ರ ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನಿಗನುಸಾರವಾಗಿ, 1862 ರಲ್ಲಿ ಕಲಕತ್ತೆಯಲ್ಲಿ ಉಚ್ಚ ನ್ಯಾಯಾಲಯವು ಸ್ಥಾಪನೆಗೊಂಡಿತು. ಆ ನಂತರದಲ್ಲಿ ಮದ್ರಾಸ ಮತ್ತು ಮುಂಬಯಿಗಳಲ್ಲಿಯೂ ಉಚ್ಚ ನ್ಯಾಯಾಲಯಗಳು ಸ್ಥಾಪನೆಗೊಂಡು ಕಾರ್ಯನಿರ್ವಹಿಸಲನುವಾದವು. ಈ ನ್ಯಾಯಾಲಯಗಳ ಅಧಿಕಾರ ಮತ್ತು ಕಾರ್ಯ ವೈಖರಿಯು ಆ ಮೊದಲು ಅಸ್ತಿತ್ವದಲ್ಲಿದ್ದ ಪ್ರೆಸಿಡೆನ್ಸಿ ಪಟ್ಟಣಗಳಲ್ಲಿದ್ದ ಉಚ್ಚ ನ್ಯಾಯಾಲಯಗಳ ರೀತಿಯಲ್ಲಿಯೇ ಇದ್ದು. ಈ ಉಚ್ಚ ನ್ಯಾಯಾಲಯಗಳಿಗೆ, ಅಡ್ಮಿರಾಲ್ಟಿ ಮತ್ತು ದೀವಾಣಿ ಪ್ರಕರಣಕ್ಕೆ ಸಂಬಂಧಪಟ್ಟ ಪ್ರಕರಣಗಳಲ್ಲಿ ಮೂಲತಃ ಹಾವೆಗಳನ್ನು ಸ್ವೀಕರಿಸಿ ನಿರ್ಣಯಿಸುವ ಪ್ರಾಧಿಕಾರವಿರಲಿಲ್ಲ.

## 12. ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನು, 1911 (The Indian High Court Act, 1911)

ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನು ಬ್ರಿಟಿಶ್ ರಾಜ ಅಥವಾ ರಾಣಿಗೆ ಅಧಿಕಾರವನ್ನು ನೀಡಿ ಭಾರತೀಯ ಪ್ರದೇಶದಲ್ಲಿ ಒಂದು ಅಥವಾ ಅದಕ್ಕೂ ಹೆಚ್ಚು ಉಚ್ಚ ನ್ಯಾಯಾಲಯಗಳ ಸ್ಥಾಪನೆಯ ಅವಕಾಶವನ್ನು ಕಲ್ಪಿಸುವಂತಾಯಿತು. ಗವ್ಹರ್ನರ ಜನರಲ್ ಮಂತ್ರಾಲೋಚನೆ ಸಭೆಯು ಉಚ್ಚ ನ್ಯಾಯಾಲಯಗಳ ನ್ಯಾಯಾಧೀಶರ ಸಂಖ್ಯೆಯನ್ನು 20 ಜನರಿಗೆ ಏರಿಸುವಂತೆ ಅಧಿಕಾರವನ್ನು ನೀಡಲಾಯಿತು. ಈ ಕಾನೂನು ಪ್ರಕಾರ, ಎರಡು ವರ್ಷಗಳ ಅವಧಿಯವರೆಗೆ ಹೆಚ್ಚುವರಿ ನ್ಯಾಯಾಧೀಶರನ್ನು ನಿಯಮಿಸುವುದಕ್ಕೆ ಅನುವಾಯಿತು.

## 13. ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನು, 1915 (The Government of India Act, 1915)

1915 ರ ಉಚ್ಚ ನ್ಯಾಯಾಲಯಗಳ ಕಾನೂನು ಆ ಪೂರ್ವದ 1861 ರ ಮತ್ತು 1911 ರ ಉಚ್ಚ ನ್ಯಾಯಾಲಯಗಳ ಕಾನೂನುಗಳ ಎಲ್ಲ ನಿಯಮಾವಳಿಗಳನ್ನು ಕ್ರೋಢೀಕರಿಸುವುದರಲ್ಲಿ ಸಹಾಯಕಾರಿಯಾಯಿತು. ಅಲ್ಲದೆ ಈ ಕೆಳಗಿನಂತೆ ಸುಧಾರಣೆ ಕ್ರಮವಾಗಿ ಪರಿಣಾಮಕಾರಿಯಾಯಿತು.

a) ಕಂದಾಯಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳಿಗೆ ಸಂಬಂಧಪಟ್ಟ ಮೂಲ ಪ್ರಾಧಿಕಾರವನ್ನು ಕಿತ್ತಿಕೊಳ್ಳಲಾಯಿತು. ಆದರಿಂದಾಗಿ ಉಚ್ಚ ನ್ಯಾಯಾಲಯಗಳು ಕಂದಾಯಕ್ಕೆ ಸಂಬಂಧಪಟ್ಟ ಕೇವಲ ಮೇಲ್ಮನವಿ ಪ್ರಕರಣಗಳನ್ನು ಮಾತ್ರ ವಿಚಾರಿಸಿ ನಿರ್ಣಯಿಸುವ ಅಧಿಕಾರವನ್ನು ಪಡೆದುಕೊಳ್ಳುವಂತಾಯಿತು.

b) ಗವರ್ನರ ಜನರಲ್, ಗವರ್ನರ, ಲೆಫ್ಟನಂಟ ಗವರ್ನರ ಜನರಲ್, ಚೀಫ್ ಕಮೀಶನರ್ ಮತ್ತು ಅವರ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರು ಮತ್ತು ಮಂತ್ರಾಲಯ ಸದಸ್ಯರು ಮತ್ತು ಅಧಿಕಾರಕ್ಕನುಗುಣವಾಗಿ ಕಾರ್ಯ ನಿರ್ವಹಿಸುತ್ತಲಿರುವಾಗ ಘಟಿಸಿದ ಯಾವುದೇ ಕೃತ್ಯಕ್ಕಾಗಿ ಅವರನ್ನು ವಿಚಾರಣೆಗೆ ಗುರಿಪಡಿಸದಂತೆ ಅವಕಾಶವನ್ನು ಕಲ್ಪಿಸಲಾಯಿತು. ಅವರು ದೀವಾಣೀ ಮತ್ತು ಕ್ರಿಮಿನಲ್ ಪ್ರಾಧಿಕಾರದಿಂದ ಮಾತ್ರವಲ್ಲದೆ, ಅವರು ಬಂಧನಕ್ಕೊಳಪಡದಂತೆಯೂ ನಿರ್ದೇಶಿಸಲಾಯಿತು. ಈ ರೀತಿಯಾದ ವಿಮುಕ್ತಿಯು ಉಚ್ಚನ್ಯಾಯಾಲಯದ ನ್ಯಾಯಾಧೀಶರಿಗೂ ಅನ್ವಯಕಾರಿಯಾಯಿತು.

c) 1915 ರ ಕಾನೂನಿಗನುಸಾರವಾಗಿ ಗವರ್ನರ ಜನರಲ್‌ನು, ಯಾವುದೇ ವ್ಯಕ್ತಿ ದೀವಾಣೀ ಮತ್ತು ಕ್ರಿಮಿನಲ್ ಪ್ರಕರಣಕ್ಕೆ ಸಂಬಂಧಿಸಿದಂತೆ ಉಚ್ಚ ನ್ಯಾಯಾಲಯದ ಯಾವುದೇ ಕಾನೂನು ಕಾರ್ಯ ನಿರ್ವಹಕ್ಕೆ ಬದ್ಧನಾಗಿರುವಂತಿದ್ದರೆ, ಅವನನ್ನು ಕ್ಷಮಾದಾನ ಮಾಡುವ ಅಧಿಕಾರವನ್ನು ನೀಡಲಾಯಿತು.

d) ದೀವಾಣೀ ಪ್ರಕರಣಗಳ ನ್ಯಾಯ ನಿರ್ಣಯ ಕಾಲಕ್ಕೆ ವಾದಿ ಪ್ರತಿವಾದಿಗಳು ಒಂದೇ ಜಾತಿಯವರಾಗಿದ್ದರೆ, ಅವರ ಕಾನೂನಿನ ಆಧಾರದ ಮೇಲೆ ನ್ಯಾಯ ನಿರ್ಣಯ ಮಾಡಬೇಕಾಗುತ್ತಿತ್ತು. ಇಲ್ಲವಾದರೆ, ಪ್ರತಿವಾದಿಯು ವ್ಯಕ್ತಿಗತ ಕಾನೂನನ್ನು ಆಧರಿಸಿ ನ್ಯಾಯ ನಿರ್ಣಯ ನೀಡುವಂತಾಯಿತು. ಈ ರೀತಿಯ ವ್ಯಕ್ತಿಗತ ಕಾನೂನು, ಸ್ವತ್ತು ಹಸ್ತಾಂತರಣ, ಬಾಡಿಗೆ, ಇಬ್ಬರು ವ್ಯಕ್ತಿಗಳ ನಡುವಿನ ಕರಾರು ಇತ್ಯಾದಿಗಳಿಗೆ ಅನ್ವಯಗೊಳಿಸುವಂತಾಯಿತು.

## 14. ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನು, 1935 (The Government of India Act 1935)

ಭಾರತ ಸರಕಾರ ರಚನೆ ಮತ್ತು ಕಾರ್ಯ ನಿರ್ವಹಣೆಯು ಫೆಡರಲ್ ನಿಯಮಗಳಿಗನುಗುಣವಾಗಿ ಕಾರ್ಯ ನಿರ್ವಹಿಸುವಂತೆ ಭಾರತೀಯ ಉಚ್ಚನ್ಯಾಯಾಲಯಗಳ ಕಾನೂನು ಸಹಾಯಕಾರಿಯಾಯಿತು. ಪ್ರಾಂತಗಳಿಗೆ ಸ್ವಾಯತ್ತತೆಯನ್ನು ನೀಡುವಲ್ಲಿ ನಾಂದಿಯಾಯಿತು. ಆದರೆ ಒಂದು ಸಮಸ್ಯೆ ಎಂದರೆ, ಉಚ್ಚ ನ್ಯಾಯಾಲಯಗಳ ಮೇಲ್ವಿಚಾರಣಾ ಅಧಿಕಾರವು ಕೇಂದ್ರ ಸರಕಾರಕ್ಕೆ ಸೇರಬೇಕೋ ಅಥವಾ ಪ್ರಾಂತೀಯ ಸರಕಾರಗಳಿಗೆ ಸೇರಬೇಕೋ ? ಎಂಬುದಾಗಿತ್ತು. ಒಂದು ವಿಚಾರದ ಪ್ರಕಾರ, ಕೇಂದ್ರ ಸರಕಾರದ ಮೇಲ್ವಿಚಾರಣೆಗೆ ಒಳಪಟ್ಟಿರುವುದಾಗಿದ್ದರೆ, ಸ್ಥಾನಿಕ ರಾಜಕೀಯವನ್ನು ಸಾಕಷ್ಟು ಪ್ರಮಾಣದಲ್ಲಿ ಕಡಿಮೆ ಮಾಡಬಹುದೆಂಬುದಾಗಿತ್ತು. ಇನ್ನೊಂದು ವಿಚಾರದ ಪ್ರಕಾರ, ಪ್ರಾಂತಗಳಿಗೆ ಅವುಗಳಿಗೆ ಮೇಲ್ವಿಚಾರಣೆ ಅಧಿಕಾರ

ವನ್ನು ನೀಡುವುದಾದರೆ, ಪ್ರಾಂತೀಯ ಸ್ವಾಯತ್ತತೆಗೆ ಅದ್ಯತೆಯನ್ನು ನೀಡಿದಂತಾಗು ವುದು ಎಂಬುದಾಗಿತ್ತು. ಅವರ ಪ್ರಕಾರ, ಪ್ರಾಂತಗಳಿಗೆ ಮೇಲ್ವಿಚಾರಣಾ ಅಧಿ ಕಾರವನ್ನು ನೀಡದಿದ್ದರೆ, ಅವುಗಳ ಸ್ವಾಯತ್ತತೆಯನ್ನು ಹತ್ತಿಕ್ಕಿದಂತಾಗುವುದು ಎಂಬುದಾಗಿತ್ತು.

ಚುನಾಯಿತ ಸಂಯುಕ್ತ ಸಭೆಯು, ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನು, 1935, ಇದರ ಕರಡು ಪ್ರತಿಯನ್ನು ತಯಾರುಮಾಡುವಲ್ಲಿ ಈ ಮೇಲೆ ಸೂಚಿಸಲಾದ ಎರಡನೇಯ ವಿಚಾರವನ್ನು ಪ್ರತಿಪಾದಿಸಿ, ಉಚ್ಚ ನ್ಯಾಯಾಲಯಗಳ ನಿಯಂತ್ರಣ ಅಧಿಕಾರವನ್ನು ಪ್ರಾಂತೀಯ ಸರಕಾರಕ್ಕೆ ವಹಿಸಿಕೊಡಲಾಯಿತು. ಅದೇ ರೀತಿಯಾಗಿ, ಉಚ್ಚ ನ್ಯಾಯಾಲಯಕ್ಕೆ ತನ್ನ ಕೆಳನ್ಯಾಯಾಲಯಗಳ ಮೇಲ್ವಿ ಚಾರಣೆಯನ್ನು ಹೊಂದಿರುವುದರಿಂದ, ಅವುಗಳ ಮೇಲ್ವಿಚಾರಣೆಯೂ ಸಹ ಹೊರ ನ್ಯಾಯಾಲಯಗಳಿಂದಾಗಬಾರದೆಂಬುದೂ ಆಗಿತ್ತು. ಆದರೂ ಸಹ ನ್ಯಾಯದಾನ ಕಾರ್ಯವು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವಲ್ಲಿ ಸಮರ್ಥವಾಗುವಂತೆ ಈ ಕೆಳಗೆ ಸೂಚಿಸಿದ ಹಲವಾರು ನಿಯಂತ್ರಣಕಾರೀ ಕ್ರಮಗಳನ್ನು ಕೈಕೊಳ್ಳಲಾಯಿತು.

i) ಉಚ್ಚ ನ್ಯಾಯಾಲಯದ ನ್ಯಾಯಾಧೀಶನು ತಾನು 60 ವರ್ಷ ವಯಸ್ಸು ಮುಕ್ತಾಯವಾಗುವವರೆಗೆ ಮಾತ್ರ ತನ್ನ ಹುದ್ದೆಯಲ್ಲಿ ಮುಂದುವರೆಯತಕ್ಕದು ಎಂಬುದಾಗಿತ್ತು. ಆದರೆ, ಬ್ರಿಟಿಶ್ ಸಾರ್ವಭೌಮನು ನ್ಯಾಯಾಧೀಶನನ್ನು ಅವನ ವೈಯಕ್ತಿಕ ಅನರ್ಹತೆಗಳಾದ ದೈಹಿಕ ಅಥವಾ ಮಾನಸಿಕ ಅಂಗ ಹೀನತೆ, ಅಥವಾ ದುರ್ನಡತೆಯ ಆಧಾರದ ಮೇಲೆ ಮಾತ್ರ ಅವನನ್ನು ಅವರ ಅವಧಿಯ ಮೊದಲಿಗೆ ತೆಗೆದುಹಾಕಬಹುದಾಗಿತ್ತು. ಆದರೆ, ಈ ಕಾನೂನು ಪೂರ್ವದಲ್ಲಿ ಸಾರ್ವಭೌಮನು ಯಾವುದೇ ಕಾರಣವನ್ನು ತೋರಿಸದೇ ತನಗಿಷ್ಟ ಬಂದಾಗ ತೆಗೆದು ಹಾಕಬಹು ದಾಗಿತ್ತು. ಈ ರೀತಿಯಾಗಿ ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನು, 1935 ರಲ್ಲಿ ನ್ಯಾಯಾಧೀಶರಿಗೆ ಅವರ ಹುದ್ದೆಯಲ್ಲಿ ಮುಂದುವರೆಯಬಹುದಾದ ನೈತಿಕ ಹಕ್ಕನ್ನು ಮನ್ನಿಸಿದಂತಾಯಿಲ್ಲದೆ, ನ್ಯಾಯಾಧೀಶರು ಸ್ವತಂತ್ರವಾಗಿ ಕಾರ್ಯ ನಿರ್ವಹಿಸಲು ಅನುಕೂಲವಾಯಿತು.

ii) ಭಾರತೀಯ ಉಚ್ಚ ಕಾನೂನು, 1915 ರಿಂದಾಗಿ ನ್ಯಾಯಾಧೀಶರ ಸಂಬಳ, ಅವರ ಹೆಚ್ಚುವರಿ ಹಣ ಮತ್ತು ಅವರ ಪಿಂಚಣಿ (Pension) ಇತ್ಯಾದಿ ಗಳನ್ನು ರಾಜ ಮಂತ್ರಾಲೋಚನ ಸಭೆಯ ಮೂಲಕ ನಿಗದಿತ ಗೊಳಿಸಲಾಗುತ್ತಿದ್ದು ಅವನ ನೇಮಕಾತಿಯ ತರುವಾಯ ಅವನಿಗೆ ನಷ್ಟವಾಗುವ ರೀತಿಯಲ್ಲಿ ಬದಲಾಯಿಸು ವಂತಿಲ್ಲ.

iii) ಪ್ರಾಂತಿಯ ಕಂದಾಯದ ಮೇಲೆ ಉಚ್ಚ ನ್ಯಾಯಾಲಯಗಳ ವೆಚ್ಚವು ಭರಿಸಲ್ಪಡಬೇಕೆಂಬುದಾಗಿತ್ತು. ಅಂತೆಯೇ, ಅದು ಶಾಸಕಾಂಗದ ನಿರ್ಣಯಕ್ಕೆ ಬದ್ಧವಾಗಿರಬೇಕೆಂಬುದಿಲ್ಲವೆಂಬುದಾಗಿತ್ತು.

iv) ಶಾಸಕಾಂಗದಲ್ಲಿ ಯಾವುದೇ ಉಚ್ಚ ನ್ಯಾಯಾಲಯದ ನ್ಯಾಯಾಧೀಶನ ಕಾರ್ಯ ನಿರ್ವಹಣೆ ಕುರಿತು ಚರ್ಚೆಯನ್ನು ಮಾಡತಕ್ಕದಲ್ಲ.

v) ಉಚ್ಚ ನ್ಯಾಯಾಲಯದ ಅಧಿಕಾರವನ್ನು ಭ್ರಷ್ಟಗೊಳಿಸಬಹುದಾದ ಯಾವುದೇ ಮಸೂದೆಯನ್ನು ಮಂಡಿಸುವ ಮೊದಲು ಬ್ರಿಟಿಶ್ ಸಾರ್ವಭೌಮನ ಸಮ್ಮತಿಯನ್ನು ಪಡೆಯಬೇಕೆಂಬ ಅವಶ್ಯಕತೆಯನ್ನು ಕಡ್ಡಾಯಗೊಳಿಸಲಾಯಿತು. ಇದಕ್ಕೆ ಸಂಬಂಧಪಟ್ಟ ಸಲಹೆ ಸೂಚನೆಗಳನ್ನು ಗವ್ಹರ್ನರ ಜನರಲ್ ಮತ್ತು ಗವ್ಹರ್ನರ ಇವರಿಗೆ ನೀಡಲಾಯಿತು.

ಈ ವೇಳೆ ನಮೂದಿಸಲಾದ ನಿಯಮಾವಳಿಗಳು ನ್ಯಾಯಾಂಗದ ಸ್ವಾತಂತ್ರ್ಯವನ್ನು ಎತ್ತಿ ಹಿಡಿದಂತಾಯಿತಲ್ಲದೆ ಉಚ್ಚ ನ್ಯಾಯಾಲಯದ ಘನತೆ ಮತ್ತು ಗೌರವಗಳನ್ನು ಕಾಪಾಡುವಂತಾಯಿತು.

ಭಾರತೀಯ ಉಚ್ಚ ನ್ಯಾಯಾಲಯಗಳ ಕಾನೂನು, 1935 ರಲ್ಲಿ ಉಚ್ಚ ನ್ಯಾಯಾಲಯದ ರಚನೆ ಮತ್ತು ಕಾರ್ಯ ನಿರ್ವಹಣೆಯಲ್ಲಿ ಈ ಕೆಳಗಿನ ಬದಲಾವಣೆಯನ್ನುಂಟು ಮಾಡಿತು.

i) ಈ ಮೊದಲಿನ ಕಾನೂನು ಪ್ರಕಾರ, ಉಚ್ಚ ನ್ಯಾಯಾಲಯದಲ್ಲಿ ನಿಯಮಿಸಬಹುದಾದ ಒಟ್ಟು ನ್ಯಾಯಾಧೀಶರ ಸಂಖ್ಯೆಯನ್ನು 20 ಕ್ಕೆ ನಿಗದಿಗೊಳಿಸಲಾಗಿತ್ತು. ಆದರೆ, ಉಚ್ಚ ನ್ಯಾಯಾಲಯ ಕಾನೂನು, 1935 ಈ ರೀತಿಯಾದ ಕಡ್ಡಾಯವನ್ನು ತೆಗೆದುಹಾಕಲಾಯಿತಲ್ಲದೆ, ರಾಜ ಮಂತ್ರಾಲೋಚನ ಸಭೆಯು ಕಾಲ ಕಾಲಕ್ಕೆ ತಕ್ಕಹಾಗೆ ನ್ಯಾಯಾಧೀಶರ ಸಂಖ್ಯೆಯನ್ನು ನಿಗದಿಗೊಳಿಸಬಹುದಾಯಿತು.

ii) ಉಚ್ಚ ನ್ಯಾಯಾಲಯದ ನ್ಯಾಯಾಧೀಶನನ್ನು ಬ್ರಿಟಿಶ್ ಸಾರ್ವಭೌಮನು ತನ್ನ ರಾಜ ಮುದ್ರೆಯಡಿಯಲ್ಲಿ ಘೋಷಿಸಿ ನಿಯಮಿಸಬಹುದಾದರೆ, ಗವ್ಹರ್ನರ ಜನರಲ್‌ನು ಹೆಚ್ಚುವರಿ ನ್ಯಾಯಾಧೀಶರನ್ನು ಎರಡು ವರ್ಷಗಳ ವರೆಗೆ ತಾತ್ಕಾಲಿಕ ನೇಮಕಾತಿಯನ್ನು ಮಾಡುವಂತಾಯಿತು. ಆದರೆ, ಈ ರೀತಿಯಾಗಿ ನಿಯಮಿಸಲ್ಪಟ್ಟ ಹೆಚ್ಚುವರಿ ನ್ಯಾಯಾಧೀಶರನ್ನು ನಿಗದಿತಗೊಳಿಸುವ ಅಧಿಕಾರವನ್ನು ರಾಜಮಂತ್ರಾಲೋಚನ ಸಭೆಗೆ ನೀಡಲಾಯಿತು.

iii) ಅರ್ಹ ನಾಗರಿಕರನ್ನು ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ನೇಮಕಾತಿ ಹೊಂದುವ ಆ ಮೊದಲಿನ ಪದ್ಧತಿಯು ಮುಂದುವರೆಯಿತು. ಅದನ್ನು ತೊಡೆದು ಹಾಕುವ ಯಾವುದೇ ನಿಯಮವನ್ನು ಈ ಕಾನೂನು ಸೂಚಿಸಲಿಲ್ಲ. ಇಂಥಹ ನಾಗರಿಕ ನ್ಯಾಯಾಧೀಶರ ನೇಮಕಾತಿಯು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶನ ಮೂಲಕ ನೆರವೇರುವಂತಾಯಿತು.

iv) ಅತ್ಯಂತ ಪ್ರಾಮುಖ್ಯ ಬೆಳವಣಿಗೆ ಎಂದರೆ ಕೇಂದ್ರೀಯ ನ್ಯಾಯಾಲಯಗಳ ಸ್ಥಾಪನೆಗೆ 1935 ರ ಕಾನೂನು ನಾಂದಿಯಾಯಿತು.

## 15. ಕೇಂದ್ರೀಯ ನ್ಯಾಯಾಲಯ (Federal Court)

ಭಾರತ ಸರಕಾರ ಕಾನೂನು, 1935 ಆ ಪೂರ್ವದ ಎಲ್ಲ ಕಾನೂನುಗಳನ್ನು ಶೂನ್ಯಗೊಳಿಸಿತಲ್ಲದೆ, ಅದು ದೇಶಕ್ಕೆ ಶಕ್ತಿಯುತವಾದ ಕೇಂದ್ರ ಸರಕಾರದ ಸ್ಥಾಪನೆ

ಮತ್ತು ಆದರಿಂದಾಗಿ ದೇಶದ ಎಲ್ಲ ವಿಭಾಗಗಳನ್ನೂ ಒಗ್ಗೂಡಿಸುವ ಕಾರ್ಯದಲ್ಲಿ ಬಹುಮಟ್ಟಿಗೆ ಸಹಾಯಕಾರಿಯಾಯಿತು. ಬಲಿಷ್ಠ ಕೇಂದ್ರ ಸರಕಾರ ಸ್ಥಾಪನೆಗೆ ಅನುವು ಮಾಡಿಕೊಟ್ಟಂತೆ ಅದು ಸರ್ವೋಚ್ಚ ಕೇಂದ್ರೀಯ ನ್ಯಾಯಾಲಯದ (Federal Court) ಸ್ಥಾಪನೆಯ ಅವಶ್ಯಕತೆಯನ್ನು ಎತ್ತಿ ತೋರಿಸಿತು. ಅಂತೆಯೇ, 1935 ರ ಕಾನೂನು ಕೇಂದ್ರೀಯ ನ್ಯಾಯಾಲಯವನ್ನು ಸ್ಥಾಪಿಸುವಂತೆ ಸ್ಥಾಪಿಸುವ ಅಧಿಕಾರವನ್ನು ನೀಡಿತು.

## ಕೇಂದ್ರೀಯ ನ್ಯಾಯಾಲಯದ ರಚನೆ (Constitution of Federal Court)

ಕೇಂದ್ರೀಯ ನ್ಯಾಯಾಲಯವು ಒಬ್ಬ ಮುಖ್ಯ ನ್ಯಾಯಾಧೀಶನನ್ನೊಳಗೊಂಡಿರುವುದಾಗಿತ್ತಲ್ಲದೆ, ಇನ್ನುಳಿದ ಆರು ಜನರಿಗೆ ಮಿಕ್ಕದಂತೆ ಸಹಾಯಕ ನ್ಯಾಯಾಧೀಶರನ್ನೊಳಗೊಂಡಿರಬಹುದಾಗಿತ್ತು. ಆದರೂ, ಅವಶ್ಯವೆಂದು ಮನಗಂಡಿರುವುದಾದರೆ ಸಂಸತ್ತಿನ ಅನುಮತಿಯನ್ನು ಪಡೆದುಕೊಂಡು ಹೆಚ್ಚಿಸಬಹುದಾಗಿತ್ತು. ಈ ನ್ಯಾಯಾಧೀಶರ ನೇಮಕಾತಿಯನ್ನು ಬ್ರಿಟಿಶ್ ರಾಜ ಅಥವಾ ರಾಣಿಯು ಮಾಡಬಹುದಾಗಿತ್ತಲ್ಲದೆ, ಅವರ ಸೇವಾವಧಿ ಕಾಲವನ್ನು ಅವರ 65 ವರ್ಷಕ್ಕೆ ಮಿಕ್ಕದಂತೆ ಎಂದು ನಿಗದಿತಗೊಳಿಸಲಾಗಿತ್ತು. ಅವನ ಸೇವಾವಧಿ ಕಾಲದಲ್ಲಿ ಅವನು ದುರ್ನಡತೆಯನ್ನೂ ದೈಹಿಕ ಅಥವಾ ಮಾನಸಿಕ ದೌರ್ಬಲ್ಯದಿಂದ ಅನರ್ಹನೆಂದು ಪರಿಗಣಿಸಲ್ಪಡುವ ಹಾಗಿದ್ದರೆ ಮತ್ತು ಬ್ರಿಟಿಶ್ ಸಾರ್ವಭೌಮನ ವಿಚಾರಣೆಯಿಂದಾಗಿ ಪ್ರಿವ್ಹಿಕೌನ್ಸಿಲ್‌ವು ಈ ರೀತಿಯಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾದರೆ, ಅವನನ್ನು ಆ ಅವಧಿಯ ಮೊದಲಿಗೆ ನಿರ್ವತ್ತಗೊಳಿಸಬಹುದಾಗಿತ್ತು.

## ನ್ಯಾಯಾಧೀಶರ ಅರ್ಹತೆಗಳು (Qualification of the Judges)

ಕೇಂದ್ರೀಯ ನ್ಯಾಯಾಲಯದ ನ್ಯಾಯಾಧೀಶನಾಗಬಹುದಾದ ವ್ಯಕ್ತಿಯು 5 ವರ್ಷಕಾಲ ಉಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿ ಕಾರ್ಯ ನಿರ್ವಹಿಸಿರಬೇಕು ಅಥವಾ ಯಾವುದೇ ಉಚ್ಚ ನ್ಯಾಯಾಲಯದಲ್ಲಿ 10 ವರ್ಷಕಾಲ ನ್ಯಾಯವಾದಿಯಾಗಿ ಕಾರ್ಯ ಮಾಡಿದವನಾಗಿರಬೇಕು. ಆದರೆ, ಮುಖ್ಯ ನ್ಯಾಯಾಧೀಶನಾಗುವ ವ್ಯಕ್ತಿಯು ಅತೀ ಕಡಿಮೆ ಎಂದರೆ, 15 ವರ್ಷಕಾಲ ಯಾವುದೇ ಉಚ್ಚ ನ್ಯಾಯಾಲಯದಲ್ಲಿ ನ್ಯಾಯವಾದಿಯಾಗಿ ಕಾರ್ಯಮಾಡಿದವನಾಗಿರಬೇಕಲ್ಲದೆ ಅವನು ಬ್ಯಾರಿಸ್ಟರ ಪದವೀಧರನಾಗಿರಬೇಕು.

## ಕೇಂದ್ರೀಯ ನ್ಯಾಯಾಲಯದ ಪ್ರಾಧಿಕಾರ (Jurisdiction of the Federal Court)

ಕೇಂದ್ರೀಯ ನ್ಯಾಯಾಲಯಕ್ಕೆ ಮೂಲ ಮತ್ತು ಮೇಲ್ಮನವಿ ವಿಚಾರಣೆಯ ಎರಡು ಬಗೆಯ ಪ್ರಾಧಿಕಾರವಿತ್ತು ಮತ್ತು ಅದು ಈ ಕೆಳಗಿನಂತಿತ್ತು.

i) ಪ್ರಾಂತಗಳ ಮತ್ತು ರಾಜ್ಯಗಳ ಕೇಂದ್ರೀಯ ಸರಕಾರದೊಂದಿನ ವ್ಯಾಜ್ಯವು ಯಾವುದೇ ಕಾನೂನುಬದ್ಧ ಹಕ್ಕಿನ ಪರಿಮಿತಿಯನ್ನು ನಿರ್ಧರಿಸುವುದಿದ್ದರೆ ಅಂಥಹ ವ್ಯಾಜ್ಯದ ಸಂಪೂರ್ಣ ಮೂಲ ಪ್ರಾಧಿಕಾರವನ್ನು ಹೊಂದಿತ್ತು. ಆದರೆ ಅದು ಕಾನೂನಿನ ಮತ್ತು ವಾಸ್ತವಿಕತೆಗೆ ಸಂಬಂಧಪಟ್ಟ ವಿಷಯವಾಗಿರಬಹುದಾದ ಅವಶ್ಯಕತೆಯಿತ್ತು. ರಾಜ ಮನೆತನಕ್ಕೆ ಸಂಬಂಧಪಟ್ಟ ವಿಷಯವನ್ನು ಕುರಿತಾದ ವ್ಯಾಜ್ಯದಲ್ಲಿ ರಾಜ್ಯವು ಪಕ್ಷಗಾರನಾಗಿದ್ದರೆ ಮತ್ತು ಕೇಂದ್ರದೊಂದಿಗಿನ ಅದರ ಸಂಬಂಧದ ವ್ಯಾಪ್ತಿಗೆ ಪರಿಮಿತವಾದ ಪ್ರಕರಣವಾಗಿದ್ದರೆ, ಅದನ್ನು ನಿರ್ಧರಿಸುವ ಸಂಪೂರ್ಣ ಪ್ರಾಧಿಕಾರವನ್ನು ಕೇಂದ್ರಿಯ ನ್ಯಾಯಾಲಯಕ್ಕೆ ನೀಡಲಾಯಿತು.

ii) ಕೇಂದ್ರೀಯ ನ್ಯಾಯಾಲಯದ ಮೇಲ್ಮನವಿಯ ಪ್ರಾಧಿಕಾರವು, ಉಚ್ಚ ನ್ಯಾಯಾಲಯದಿಂದ ಅರ್ಹತಾ ಪತ್ರವನ್ನು ಪಡೆದುಕೊಂಡ ಪ್ರಕರಣಗಳಿಗೆ ಮಾತ್ರ ಸೀಮಿತವಾಗಿತ್ತು. ಉಚ್ಚ ನ್ಯಾಯಾಲಯವು ಪುಸ್ತಕ ಪ್ರಕರಣದ ಬಗ್ಗೆ ಒಂದು ಅರ್ಹತಾ ಪತ್ರವನ್ನು ನೀಡಿ ಅದು ಕೇಂದ್ರೀಯ ನ್ಯಾಯಾಲಯದಿಂದ ವಿಚಾರಣೆಗೆ ಒಳಪಡಿಸಬಹುದಾದ ಅವಶ್ಯಕತೆಯನ್ನು ಸೂಚಿಸಬೇಕು. ವಿತ್ತೀಯ ಪ್ರಕರಣಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಕುರಿತು ಶಾಸಕಾಂಗವು ವಿಧೇಯಕವನ್ನು ಪಾಸು ಮಾಡಿ, ಉಚ್ಚ ನ್ಯಾಯಾಲಯದ ಅರ್ಹತಾ ಪತ್ರದ ಅವಶ್ಯಕತೆ ಇಲ್ಲದೆಯೇ, ಮೇಲ್ಮನವಿ ಸಲ್ಲಿಸಬಹುದಾದ ಅವಕಾಶವನ್ನು ಕಲ್ಪಿಸಿತ್ತು. ಅಲ್ಲದೆ ವಿಶೇಷ ಅನುಮತಿ ಕುರಿತಾದ ನಿಬಂಧನೆಯನ್ನು ಸೂಚಿಸುವ ಖಂಡವನ್ನು ಸೇರಿಸಿದಾಗಿದ್ದರೆ, ಆದಕ್ಕನುಗುಣವಾದ ಅವಶ್ಯಕತೆಯನ್ನು ಪೂರೈಸಬೇಕಾದ ಅವಶ್ಯಕತೆ ಇತ್ತು.

iii) ರಾಜ್ಯವು ಯಾವುದೇ ಶಾಸನದ ಕಾನೂನಿನ ಅರ್ಥೈಯಿಸುವ ಕುರಿತು ನೇರವಾಗಿ ಮನವಿಯನ್ನು ಸಲ್ಲಿಸಬಹುದಾಗಿತ್ತು.

ಕೇಂದ್ರೀಯ ನ್ಯಾಯಾಲಯದಿಂದ ಪ್ರೀವಿ ಕೌನ್ಸಿಲ್‌ಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿತ್ತು. ಕೇಂದ್ರೀಯ ನ್ಯಾಯಾಲಯವು ತನ್ನ ಮೂಲ ಪ್ರಾಧಿಕಾರವನ್ನು ಅನುಲಕ್ಷಿಸಿ, 1935 ರ ಭಾರತೀಯ ಕಾನೂನಿನ ಯಾವುದೇ ನಿಯಮಾವಳಿಯ ಅರ್ಥವನ್ನು ವಿಶ್ಲೇಷಿಸುವುದಾಗಿದ್ದರೆ, ಪ್ರೀವಿ ಕೌನ್ಸಿಲ್‌ದ ಅನುಮತಿಯ ಅವಶ್ಯಕತೆ ಇಲ್ಲದೆಯೇ, ಮೇಲ್ಮನವಿಯನ್ನು ಸಲ್ಲಿಸಬಹುದಾಗಿತ್ತು.

ಕೇಂದ್ರೀಯ ನ್ಯಾಯಾಲಯವು ಸಲಹಾ ಅಭಿವ್ಯಕ್ತ ಪ್ರಾಧಿಕಾರವನ್ನು ಹೊಂದಿತ್ತು. ತನ್ನ ಈ ಪ್ರಾಧಿಕಾರಕ್ಕನುಗುಣವಾಗಿ ಕಾರ್ಯ ನಿರ್ವಹಿಸುವಾಗ, ಗವ್ಹರ್ನರ ಜನರಲ್‌ನು ಈ ನ್ಯಾಯಾಲಯದ ಅಭಿಪ್ರಾಯವನ್ನು ಕೋರಲು, ತನ್ನ ಸಲಹೆಯನ್ನು ಯಾವುದೇ ಕಾನೂನಿನ ಅಥವಾ ವಾಸ್ತವಿಕತೆಯ ಕುರಿತಾದ ವಿಚಾರವನ್ನು ಅಭಿವ್ಯಕ್ತಗೊಳಿಸಬಹುದಾದ ಅಧಿಕಾರವನ್ನು ಹೊಂದಿತ್ತು.

ಆದರೆ, ಒಂದು ಮಾತನ್ನು ಗಮನಿಸುವುದು ಅತ್ಯವಶ್ಯ. ಅದೇನೆಂದರೆ, ಈ ಕೇಂದ್ರೀಯ ನ್ಯಾಯಾಲಯವು 1935, ಭಾರತೀಯ ಕಾನೂನಿನ ನಿಯಮಾವಳಿಯ ಅರ್ಥವಿಶ್ಲೇಷಣೆಯ ಅಂತಿಮ ನ್ಯಾಯಾಲಯವಾಗಿರಲಿಲ್ಲ. ಈ ನ್ಯಾಯಾಲಯದ

ನಿರ್ಣಯದ ಮೇಲೆ ಪ್ರೀವ್ಹಿ ಕೌನ್ಸಿಲ್‌ಗೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿತ್ತು. ಆದರೂ, ಕೇಂದ್ರೀಯ ನ್ಯಾಯಾಲಯವು ನ್ಯಾಯದಾನ ಕಾರ್ಯದಲ್ಲಿ ತನ್ನದೇ ಆದ ಸ್ವಾತಂತ್ರ್ಯತೆಯನ್ನು, ಏಕತೆಯನ್ನು ಕಾಪಾಡಿಕೊಳ್ಳುವಲ್ಲಿ ಬಹುಮಟ್ಟಿಗೆ ಸಹಾಯಕಾರಿಯಾಯಿತು. ಈ ಕೇಂದ್ರಿಯ ನ್ಯಾಯಾಲಯವು ಆ ಮುಂದೆ ಸರ್ವೋಚ್ಚ ನ್ಯಾಯಾಲಯವಾಗಿ ರೂಪುಗೊಂಡಿತು.

## 16. ಸರ್ವೋಚ್ಚ ನ್ಯಾಯಾಲಯ (The Supreme Court)

ಭಾರತೀಯ ಕಾನೂನು, 1935ಕ್ಕನುಗುಣವಾಗಿ ಸ್ಥಾಪನೆಗೊಂಡ ಕೇಂದ್ರೀಯ ನ್ಯಾಯಾಲಯವು 1947 ರಲ್ಲಿ ಅತ್ಯಂತ ಪ್ರಬಲವಾಗಿ ಪರಿವರ್ತನಗೊಂಡಿತು ಯಾಕೆಂದರೆ, 1947 ರ ಕಾನೂನಿಗನುಗುಣವಾಗಿ, ಅದರ ಪ್ರಾಧಿಕಾರ ಸಾಮರ್ಥ್ಯವನ್ನು ಹೆಚ್ಚಿಸಲಾಯಿತು. ಅದರಿಂದಾಗಿ, 1949 ರಲ್ಲಿ ಪ್ರೀವ್ಹಿ ಕೌನ್ಸಿಲ್‌ಗೆ ಮೇಲ್ಮನವಿ ಸಲ್ಲಿಸಬಹುದಾದ ನಿಯಮಾವಳಿಯನ್ನು ರದ್ದುಪಡಿಸಿದ (Abolition of Privy Council Jurisdiction Act, 1949) ಮೇಲಂತೂ ಅದು ರಾಷ್ಟ್ರದ ಸರ್ವೋಚ್ಚ ನ್ಯಾಯದಾನದ ಪ್ರಾಧಿಕಾರವನ್ನು ಹೊಂದಿದ ನ್ಯಾಯಾಲಯವಾಗಿ ಮಾರ್ಪಾಡನ್ನು ತಳೆದು ಭಾರತದ ಸ್ವಾತಂತ್ರ್ಯ ನಂತರ 1950 ಜನೇವರಿ 26 ರಂದು ಭಾರತವು ಪ್ರಜಾರಾಜ್ಯ ಗಣತಂತ್ರ ರಾಷ್ಟ್ರವಾಗಿ ಮಾರ್ಪಾಡುಗೊಂಡಿತು. ಅದರಿಂದಾಗಿ, ಭಾರತದ ಸರ್ವಶ್ರೇಷ್ಠ ನ್ಯಾಯಾಲಯವೆಂದು ಸರ್ವೋಚ್ಚ ನ್ಯಾಯಾಲಯವನ್ನು ಸ್ಥಾಪಿಸಲಾಯಿತು. ಈ ನ್ಯಾಯಾಲಯವು 1950 ರ ಜನೇವರಿ 26 ರಿಂದ ಕೇಂದ್ರೀಯ ನ್ಯಾಯಾಲಯದ ಉತ್ತರಾಧಿಕಾರಿ ನ್ಯಾಯಾಲಯವಾಗಿ ಕಾರ್ಯನಿರ್ವಹಿಸಲು ಪ್ರಾರಂಭಿಸಿತು.

ಭಾರತದ ಸಂವಿಧಾನದ ಆದೇಶಕ್ಕನುಗುಣವಾಗಿ ಅಸ್ತಿತ್ವಕ್ಕೆ ಬಂದ ಸರ್ವೋಚ್ಚ ನ್ಯಾಯಾಲಯವು ರಾಷ್ಟ್ರದ ಸರ್ವಶ್ರೇಷ್ಠ ನ್ಯಾಯಾಲಯವಾಗಿರುತ್ತದೆ. ಇದು ಮೂಲ ಮತ್ತು ಮೇಲ್ಮನವಿ ಪ್ರಾಧಿಕಾರವನ್ನು ಹೊಂದಿರುತ್ತದೆ. ಇದು ನಮ್ಮ ಸಂವಿಧಾನದ ಸಂರಕ್ಷನಂತೆಯೂ ಕಾರ್ಯ ನಿರ್ವಹಿಸುತ್ತದೆ. ಸ್ವತಂತ್ರ ಭಾರತವು ಸಂಯುಕ್ತ ಸ್ವರೂಪೀ ರಾಷ್ಟ್ರವಾಗಿದ್ದು ಕೇಂದ್ರದಲ್ಲಿ ಕೇಂದ್ರ ಸರಕಾರವೂ, ಮತ್ತು ಇನ್ನುಳಿದ ಅದರಡಿಯಲ್ಲಿ ಅಸ್ತಿತ್ವದಲ್ಲಿರುವ ರಾಜ್ಯಗಳಲ್ಲಿ ರಾಜ್ಯ ಸರಕಾರವೂ ತನ್ನ ತನ್ನ ಕಾರ್ಯ ನಿರ್ವಾಹಕ ಪರಿಮಿತಿಯಲ್ಲಿ ಕಾರ್ಯ ನಿರ್ವಹಿಸುತ್ತಲಿವೆ. ಅದರಿಂದ ಉದ್ಭವಿಸಬಹುದಾದ ವ್ಯಾಜ್ಯಗಳ ಅಂತಿಮ ನಿರ್ಣಯ ನೀಡುವ ಪ್ರಾಧಿಕಾರವನ್ನು ಹೊಂದಿರುತ್ತದೆ. ಅಂತೆಯೇ ರಾಜ್ಯ ರಾಜ್ಯಗಳ ನಡುವಿನ, ಕೇಂದ್ರ ಸರಕಾರದ ಮತ್ತು ರಾಜ್ಯಗಳ ನಡುವಿನ ವ್ಯಾಜ್ಯಗಳ ಅಂತಿಮ ನಿರ್ಣಯ ನೀಡುವ ಹಾಗೂ ಸಂವಿಧಾನದ ಮೂಲಭೂತ ಹಕ್ಕುಗಳ ಉಲ್ಲಂಘನೆಗಾಗಿ ಉಂಟಾದ ಸಮಸ್ಯೆಗಳನ್ನು ಪರಿಹರಿಸಬಹುದಾದ ಮೂಲ ಸ್ವರೂಪೀ ಪ್ರಾಧಿಕಾರವನ್ನು ಹೊಂದಿರುತ್ತದೆ.

**i) ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶನ ನೇಮಕಾತಿ (Appointment of the Chief Justice of Supreme Court)**

ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶನ ನೇಮಕಾತಿಯನ್ನು ಭಾರತದ ರಾಷ್ಟ್ರಪತಿಯು ಮಾಡುತ್ತಾನೆ. ಅದಕ್ಕಾಗಿ ಅವನು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರನ್ನಾಗಲೀ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರನ್ನಾಗಲೀ ಸಮಾಲೋಚಿಸಬಹುದಾಗಿದೆ. ಆದರೆ ಸರ್ವೋಚ್ಚ ನ್ಯಾಯಾಲಯದ ಇನ್ನಿತರ ನ್ಯಾಯಾಧೀಶರ ನೇಮಕಾತಿಗಾಗಿ ಮುಖ್ಯ ನ್ಯಾಯಾಧೀಶನನ್ನು ಸಮಾಲೋಚಿಸುವುದು ಅತ್ಯವಶ್ಯವಾಗಿದೆ.

**ii) ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನ ಅರ್ಹತೆಗಳು (Qualifications of the Justice of the Supreme Court)**

ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನೆಂದು ನೇಮಕಾತಿಯನ್ನು ಹೊಂದಲು ಅವನು ಈ ಕೆಳಗಿನ ಅರ್ಹತೆಗಳನ್ನು ಹೊಂದಿರಬೇಕು.

a) ಅವನು ಯಾವುದೇ ರಾಜ್ಯದ ಉಚ್ಚ ನ್ಯಾಯಾಲಯದ ನ್ಯಾಯಾಧೀಶನೆಂದು 5 ವರ್ಷಗಳವರೆಗೆ ಸೇವೆ ಸಲ್ಲಿಸಿರಬೇಕು; ಅಥವಾ

b) ಅವನು ಯಾವುದೇ ಉಚ್ಚ ನ್ಯಾಯಾಲಯದಲ್ಲಿ ಕನಿಷ್ಠ 10 ವರ್ಷಗಳವರೆಗೆ ನ್ಯಾಯವಾದಿಯಾಗಿ ಕಾರ್ಯ ನಿರ್ವಹಿಸಿರಬೇಕು; ಅಥವಾ

c) ರಾಷ್ಟ್ರಪತಿಯ ಅಭಿಪ್ರಾಯದಲ್ಲಿ ಅವನು ವಿಖ್ಯಾತ ಕಾನೂನು ಶಾಸ್ತ್ರಜ್ಞನೆಂದು ಪರಿಗಣಿಸಲ್ಪಟ್ಟಿರಬೇಕು.

ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನೆಂದು ನೇಮಕಾತಿಯನ್ನು ಹೊಂದಿದ ವ್ಯಕ್ತಿ ತನ್ನ ಪದಗ್ರಹಣ ಪೂರ್ವದಲ್ಲಿ ರಾಷ್ಟ್ರಪತಿಯ ಮುಂದೆ ಇಲ್ಲವೆ ಆ ಕಾರ್ಯಕ್ಕಾಗಿ ರಾಷ್ಟ್ರಪತಿಯಿಂದ ನಿಯುಕ್ತನಾದ ವ್ಯಕ್ತಿಯ ಮುಂದೆ ಪ್ರತಿಜ್ಞಾ ವಿಧಿ ಕಾರ್ಯವನ್ನು ನೆರವೇರಿಸತಕ್ಕದ್ದು.

**iii) ನ್ಯಾಯಾಧೀಶನ ಕಾಲಾವಧಿ ಮತ್ತು ರಿಕ್ತತೆ (Tenure and Vacancy in the post of Judge)**

ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನು ತನ್ನ 65 ನೇ ವರ್ಷ ಪೂರ್ತಿಯಾಗುವವರೆಗೂ ಆ ಪದದಲ್ಲಿ ಮುಂದುವರೆಯತಕ್ಕದ್ದು. ಆದರೆ ಯಾವುದೇ ನ್ಯಾಯಾಧೀಶನು ತನ್ನ ಪದಗ್ರಹಣದ ನಂತರ ರಾಷ್ಟ್ರಪತಿಗೆ ತಾನು ನಿವೃತ್ತಿ ಹೊಂದಲಿರುವ ವಿಷಯವನ್ನು ತಿಳಿಸಿ, ಆ ಅವಧಿಯ ಪೂರ್ವದಲ್ಲಿಯೇ ನಿವೃತ್ತಿ ಹೊಂದಬಹುದಾಗಿದೆ. ಇದಲ್ಲದೆ, ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನನ್ನು ಅವನ ದುರ್ವರ್ತನೆ ಮತ್ತು ಅಸಮರ್ಥತೆಗಾಗಿ ಕಡ್ಡಾಯವಾಗಿ ನಿವೃತ್ತಗೊಳಿಸಬಹುದಾಗಿದೆ. ರಾಷ್ಟ್ರಪತಿಯ ಆಜ್ಞೆಯನ್ನು ಜಾರಿ ಮಾಡುವ ಮೊದಲು

ಅದನ್ನು ಸಂಸತ್ತಿನ ಉಭಯ ಸದನಗಳ ಸಂಯುಕ್ತ ಸಭೆಯ ಮುಂದೆ ಮಂಡಿಸಲಾಗುವುದು, ಅದೂ ಉಭಯ ಸದನಗಳ ಒಟ್ಟು ಸದಸ್ಯರ ಸಂಖ್ಯೆಯ ಬಹುಮತದ ಆಧಾರದ ಮೇಲೆ ಮತ್ತು ತತ್ಕಾಲದಲ್ಲಿ ಹಾಜರಿದ್ದ ಸದಸ್ಯರ ಮೂರನೇ ಎರಡರಷ್ಟು ಬಹುಮತದ ಆಧಾರದ ಮೇಲೆ ಪಾಸಾದರೆ ಮಾತ್ರ ನ್ಯಾಯಾಧೀಶನ ವಜಾ ಮಾಡಬಹುದಾದ ಗೊತ್ತುವಳಿಯು ಸ್ವೀಕೃತವಾದಂತೆಂದು ಪರಿಗಣಿಸಲಾಗುವುದು. ಅದಕ್ಕಾಗಿ ನ್ಯಾಯಾಧೀಶನ ದುರ್ವರ್ತನೆಯ ಕುರಿತಾದ ವಿಷಯದ ಪತ್ತೆಹಚ್ಚುವ ಮತ್ತು ಅದನ್ನು ಸಿದ್ಧಮಾಡುವ ವಿಧಾನ ಕುರಿತು ಉಪಬಂಧಗಳನ್ನು ನಿರೂಪಿಸುವ ಅಧಿಕಾರವು ಸಂಸತ್ತಿಗೆ ಇದೆ. ಇದಕ್ಕೆ ಹೊರತಾಗಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನ ಸೇವಾಭದ್ರತೆ ಮತ್ತು ಕಾಲಾವಧಿ ಕುರಿತು ಸಂವಿಧಾನದ ಉಪಬಂಧಗಳು ಆಶ್ವಾಸಿಸುತ್ತವೆ.

### iv) ನ್ಯಾಯಾಧೀಶರ ವೇತನ, ಭತ್ಯಗಳು ಇತ್ಯಾದಿ
### (Salaries, allowances etc of the Judges)

ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೆ, ಸಂವಿಧಾನದ ಎರಡನೇ ಅನುಸೂಚಿಯಲ್ಲಿ ನಮೂದಿಸಲಾಗಿರುವ ವೇತನಗಳನ್ನು ಕೊಡಲಾಗುವುದು. ಪ್ರತಿಯೊಬ್ಬ ನ್ಯಾಯಾಧೀಶನೂ ಸಂಸತ್ತಿನಿಂದ ರಚಿತವಾದ ಕಾನೂನು ಮೂಲಕ ಅಥವಾ ಕಾನೂನು ಮೇರೆಗೆ ಕಾಲಕಾಲಕ್ಕೆ ನಿರ್ಧಾರವಾಗಬಹುದಾದಂಥಹ ವಿಶೇಷಾಧಿಕಾರಗಳಿಗೂ, ಭತ್ಯಗಳಿಗೂ, ರಜೆ ಮತ್ತು ನಿರ್ವತ್ತಿ ವೇತನ ಸಂಬಂಧವಾದ ಅಧಿಕಾರಗಳಿಗೂ ಹಕ್ಕುಳ್ಳವನಾಗಿರತಕ್ಕದ್ದು ಮತ್ತು ಹಾಗೆ ನಿರ್ಧಾರವಾಗುವವರೆಗೂ ಎರಡನೇ ಅನುಸೂಚಿಯಲ್ಲಿ ನಮೂದಾಗಿರುವಂಥಹ ವಿಶೇಷಾಧಿಕಾರಗಳಿಗೂ ಭತ್ಯಗಳಿಗೂ, ಅಧಿಕಾರಗಳಿಗೂ ಹಕ್ಕುಳ್ಳವನಾಗಿರುವನು. ಯಾವುದೇ ನ್ಯಾಯಾಧೀಶನ ವಿಶೇಷಾಧಿಕಾರಗಳನ್ನಾಗಲೀ ಭತ್ಯಗಳನ್ನಾಗಲೀ ರಜೆ ಅಥವಾ ನಿವೃತ್ತಿ ವೇತನ ಸಂಬಂಧವಾದ ಅವನ ಅಧಿಕಾರಗಳನ್ನಾಗಲೀ ಅವನು ನಿಯುಕ್ತನಾದ ತರುವಾಯ ಅವನಿಗೆ ಪ್ರತಿಕೂಲವಾಗುವಂತೆ ವ್ಯತ್ಯಾಸಗೊಳಿಸಲಾಗುವುದಿಲ್ಲ.

### v) ತಾತ್ಕಾಲಿಕ ನ್ಯಾಯಾಧೀಶರ ನೇಮಕ
### (Appointment of adhoc Judges)

ಭಾರತದ ಸಂವಿಧಾನದ 127 ನೇ ಅನುಚ್ಛೇದವು ಸರ್ವೋಚ್ಚ ನ್ಯಾಯಾಲಯಕ್ಕೆ ತಾತ್ಕಾಲಿಕ ನ್ಯಾಯಾಧೀಶರನ್ನು ನೇಮಕ ಮಾಡುವ ಕುರಿತು ವಿವೇಚಿಸುತ್ತದೆ. ಅದರ ಪ್ರಕಾರ ಯಾವುದೇ ಕಾಲಕ್ಕೆ ನ್ಯಾಯಾಲಯದ ಅವಶ್ಯವಾದ ಕೋರಮ್ ಇಲ್ಲದಿದ್ದರೆ, ಅಥವಾ ನ್ಯಾಯಾಲಯದ ಸಮಾವೇಶದ ಕಾಲಕ್ಕೆ ಯಾವುದೇ ಸ್ಥಾನವು ರಿಕ್ತವಾದರೆ ಆ ಸ್ಥಾನವನ್ನು ತುಂಬಿ ಕೋರಮ್ ಪೂರ್ತಿ ಮಾಡಲು ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶನು ರಾಷ್ಟ್ರಪತಿಯ ಪೂರ್ವ ಸಮ್ಮತಿಯನ್ನು ಪಡೆದುಕೊಂಡು ಯಾವುದೇ ಉಚ್ಚ ನ್ಯಾಯಾಲಯದ ನ್ಯಾಯಾಧೀಶನನ್ನು ಸರ್ವೋಚ್ಚ ನ್ಯಾಯಾಲಯದ ತಾತ್ಕಾಲಿಕ ನ್ಯಾಯಾಧೀಶನಾಗಿ ಕಾರ್ಯನಿರ್ವಹಿಸಲು ಕೇಳಿಕೊಳ್ಳಬಹುದಾಗಿದೆ. ತಾತ್ಕಾಲಿಕ ನ್ಯಾಯಾಧೀಶನೆಂದು

ನೇಮಕಗೊಳ್ಳಲಾಗುವ ಉಚ್ಚ ನ್ಯಾಯಾಲಯದ ನ್ಯಾಯಾಧೀಶನು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನೆಂದು ನೇಮಕಗೊಳ್ಳಲು ಅವಶ್ಯವಾದ ಅರ್ಹತೆಗಳನ್ನು ಹೊಂದಿರಬಹುದಾಗಿದೆ. ಈ ರೀತಿಯಾಗಿ ನೇಮಕಾತಿಯನ್ನು ಹೊಂದಿದ ಉಚ್ಚ ನ್ಯಾಯಾಲಯದ ನ್ಯಾಯಾಧೀಶನು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನೆಂದು ಕಾರ್ಯ ನಿರ್ವಹಿಸುವ ಅವಧಿಯಲ್ಲಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನ ಅಧಿಕಾರ, ವೇತನ, ಭತ್ಯ ಇತ್ಯಾದಿಗಳನ್ನು ಪಡೆದುಕೊಳ್ಳುತ್ತಾನೆ.

ಸರ್ವೋಚ್ಚ ನ್ಯಾಯಾಲಯದ, ಫೆಡರಲ್ ನ್ಯಾಯಾಲಯಗಳ ಮತ್ತು ಉಚ್ಚ ನ್ಯಾಯಾಲಯಗಳ ನಿವೃತ್ತಿ ಹೊಂದಿದ ನ್ಯಾಯಾಧೀಶರು ಸರ್ವೋಚ್ಚ ನ್ಯಾಯಾಧೀಶರೆಂದು ಕಾರ್ಯ ಮಾಡುವ ಅವಶ್ಯಕತೆಯುಂಟಾದರೆ, ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶನು ರಾಷ್ಟ್ರಪತಿಯ ಪೂರ್ವ ಸಮ್ಮತಿಯನ್ನು ಪಡೆದುಕೊಂಡು ಅವರನ್ನು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸಲು ಕೇಳಿಕೊಳ್ಳುವ ಅಧಿಕಾರವನ್ನು ನೀಡುತ್ತದೆ. ಆದರೆ, ಈ ರೀತಿಯಾಗಿ ನೀಡಲಾದ ಆವ್ಹಾನವನ್ನು ಒಪ್ಪಿಕೊಳ್ಳಲೇಬೇಕೆಂಬ ಕಡ್ಡಾಯವೇನಿಲ್ಲ.

### vi) ಸರ್ವೋಚ್ಚ ನ್ಯಾಯಾಲಯದ ಸ್ಥಾನಮಾನ (Status of the Supreme Court)

ಸರ್ವೋಚ್ಚ ನ್ಯಾಯಾಲಯವು ಒಂದು ಅಭಿಲೇಖಿ ನ್ಯಾಯಾಲಯವಾಗಿರುತ್ತದೆ. (ಯಾವ ನ್ಯಾಯಾಲಯದ ದಾಖಲೆಗಳು ಸಾಕ್ಷಾಧಾರಗಳೆಂದು ಒಪ್ಪಿಕೊಳ್ಳಬಹುದೋ ಮತ್ತು ಯಾವುದು ನ್ಯಾಯಾಲಯದ ಮುಂದೆ ಹಾಜರಪಡಿಸಿದಾಗ ಅದರ ಸಿಂಧುತ್ವವನ್ನು ಪ್ರಶ್ನಿಸಲಾಗುವದಿಲ್ಲವೋ ಅಂಥಹ ನ್ಯಾಯಾಲಯಕ್ಕೆ ಅಭಿಲೇಖಿ ನ್ಯಾಯಾಲಯವೆಂದು ಕರೆಯುತ್ತಾರೆ) ಆದಕಿಂದಾಗಿ ತನಗೆ ಆದ ಅವಮಾನಕ್ಕೆ ಶಿಕ್ಷೆಯನ್ನು ವಿಧಿಸುವ ಅಧಿಕಾರವನ್ನೂ ಹೊಂದಿರುತ್ತದೆ.

ಸಂಸತ್ತು ಈಗ ನ್ಯಾಯಾಲಯ ನಿಂದನಾ ಕಾನೂನು, 1971, (Contempt of Court Act, 1971) ಎಂಬ ಕಾನೂನನ್ನು ಪಾಸುಮಾಡಿದೆ. ಆ ಕಾನೂನಿನ ಎರಡನೇ ಕಲಮಿನ ಪ್ರಕಾರ, ನ್ಯಾಯಾಲಯದ ನಿಂದನೆ ಅಥವಾ ಅವಮಾನವು ಸಿವ್ಹಿಲ್ ಮತ್ತು ಕ್ರಿಮಿನಲ್ ಅಪರಾಧವೆಂಬುದಾಗಿ ಪರಿಗಣಿಸಲ್ಪಡುತ್ತದೆ. ಸಿವ್ಹಿಲ್ ನಿಂದನೆ ಎಂದರೆ, ತಿಳಿದೂ ತಿಳಿದೂ ನ್ಯಾಯಾಲಯದ ನಿರ್ಣಯ, ಡಿಕ್ರಿ ನಿರ್ದೇಶನ ಮತ್ತು ಇನ್ನಿತರ ನ್ಯಾಯಾಲಯದ ವಿಧಾನಗಳನ್ನು ಅಮಾನ್ಯ ಮಾಡುವುದು. ಆದರೆ, ಕ್ರಿಮಿನಲ್ ನಿಂದನೆ ಎಂದರೆ (i) ನ್ಯಾಯಾಲಯದ ಪ್ರತಿಷ್ಠೆ ಅಥವಾ ಪಾವಿತ್ರ್ಯತೆಯನ್ನು ಭಂಗಗೊಳಿಸುವ ಅಥವಾ ಹಾಳುಮಾಡುವ ಅಥವಾ (ii) ನ್ಯಾಯಸಮ್ಮತವಾದ ನ್ಯಾಯಾಲಯದ ವಿಧಾನಗಳಲ್ಲಿ ಅನವಶ್ಯಕ ಹಸ್ತಕ್ಷೇಪವನ್ನುಂಟುಮಾಡುವ ಅಥವಾ (iii) ನ್ಯಾಯಾಲಯದ ನ್ಯಾಯ ಸಮ್ಮತ ನಿರ್ಣಯ ನೀಡುವ ಕುರಿತು ಹಸ್ತಕ್ಷೇಪ ಮಾಡಿ ಸಲ್ಲದ ಅಡೆತಡೆಯನ್ನುಂಟು ಮಾಡುವುದಾಗಿರುತ್ತದೆ.

ಆದರೆ, ಈ ಕೆಳಗೆ ನಮೂದಿಸಲ್ಪಟ್ಟವುಗಳು ಮತ್ತು ಅವುಗಳ ಪ್ರಸಾರವನ್ನು ನ್ಯಾಯಾಲಯದ ನಿಂದನೆ ಎಂದು ಪರಿಗಣಿಸಲಾಗುವುದಿಲ್ಲ.

ಎ) ಪ್ರಾಮಾಣಿಕ ಪ್ರಸಾರ ಮತ್ತು ಅವುಗಳ ಹಂಚಿಕೆ;

ಬಿ) ನ್ಯಾಯಿಕ ನಿರ್ಣಯಗಳ ಸರಿಯಾದ ಮಾಹಿತಿಯ ವರದಿ;

ಸಿ) ನ್ಯಾಯಿಕ ನಿರ್ಣಯಗಳ ಸಮಂಜಸ ಟೀಕೆ;

ಡಿ) ಉಚ್ಚ ನ್ಯಾಯಾಲಯಗಳ ಹೊರತಾಗಿ ಕೆಳನ್ಯಾಯಾಲಯಗಳ ನ್ಯಾಯಾಧೀಶರ ಕುರಿತು ಒಳ್ಳೆಯ ನಂಬುಗೆಯ ಮೇಲೆ ಮಾಡಲಾದ ತಕರಾರುಗಳು;

ಇ) ನ್ಯಾಯಾಲಯದ ಒಳಾವರಣದಲ್ಲಿ ಸಮಾವೇಶಗೊಂಡಿರುವ ವಿಶೇಷ ನ್ಯಾಯ ಪೀಠದೆದುರು ಸಮಂಜಸ ಮತ್ತು ಸರಿಯಾದ ನ್ಯಾಯಿಕ ನಿರ್ಣಯಗಳ ವರದಿ.

ನ್ಯಾಯಾಲಯವು ತನ್ನ ನಿಂದನೆ ಅಥವಾ ಅವಮಾನಕ್ಕಾಗಿ ಸಾದಾ ಶಿಕ್ಷೆಯನ್ನು 6 ತಿಂಗಳಿಗೆ ಮಿಕ್ಕದಂತೆ ವಿಧಿಸಬಹುದಾಗಿದೆ ಅಥವಾ 2000 ರೂಪಾಯಿಗಳಿಗೆ ಮಿಕ್ಕದಷ್ಟು ದಂಡವನ್ನು ಅಥವಾ ಅವೆರಡರಿಂದಲೂ ಶಿಕ್ಷೆಯನ್ನು ವಿಧಿಸಬಹುದಾಗಿದೆ.

### vii) ಸರ್ವೋಚ್ಚ ನ್ಯಾಯಾಲಯದ ಪ್ರಾಧಿಕಾರ (Jurisdiction of the Supreme Court)

ಸರ್ವೋಚ್ಚ ನ್ಯಾಯಾಲಯದ ಪ್ರಾಧಿಕಾರವನ್ನು ಈ ಕೆಳಗಿನ ಮುಖ್ಯಾಂಶಗಳಲ್ಲಿ ಕ್ರೋಢೀಕರಿಸಬಹುದಾಗಿದೆ.

### a) ಸರ್ವೋಚ್ಚ ನ್ಯಾಯಾಲಯದ ಮೂಲ ಪ್ರಾಧಿಕಾರ (Original jurisdiction of the Supreme Court)

ಭಾರತದ ಸಂವಿಧಾನದ 131 ನೇ ಅನುಚ್ಛೇದದ ಪ್ರಕಾರ, ಸರ್ವೋಚ್ಚ ನ್ಯಾಯಾಲಯವು ಈ ಕೆಳಗಿನ ವಿವಾದಗಳಲ್ಲಿ ಮೂಲ ಪ್ರಾಧಿಕಾರವನ್ನು ಹೊಂದಿದೆ.

i) ಭಾರತ ಸರಕಾರ ಮತ್ತು ಯಾವುದೇ ರಾಜ್ಯ ಅಥವಾ ರಾಜ್ಯಗಳ ನಡುವೆ;

ii) ಭಾರತ ಸರಕಾರ ಮತ್ತು ಯಾವುದೇ ರಾಜ್ಯ ಅಥವಾ ಕೆಲವು ರಾಜ್ಯಗಳು ಒಂದು ಪಕ್ಷದಲ್ಲಿದ್ದು ಇನ್ನಿತರ ರಾಜ್ಯಗಳು ಎದುರು ಪಕ್ಷದಲ್ಲಿದ್ದರೆ; ಮತ್ತು

iii) ರಾಜ್ಯ ರಾಜ್ಯಗಳ ನಡುವೆ.

ಸರ್ವೋಚ್ಚ ನ್ಯಾಯಾಲಯವು ತನ್ನ ಮೂಲ ಪ್ರಾಧಿಕಾರದಲ್ಲಿ ಯಾವುದೇ ವ್ಯಕ್ತಿ ಭಾರತ ಸರಕಾರದ ವಿರುದ್ಧ ಮಾಡಲಾದ ಸಿವಿಲ್ ದಾವೆಗಳನ್ನು ನಿರ್ಣಯ

ಕ್ಕಾಗಿ ಅಂಗೀಕರಿಸಲಿಕ್ಕಾಗದು. ಯಾವುದೇ ಮೊಕದ್ದಮೆಯು ಕಾನೂನು ಬದ್ಧ ಹಕ್ಕಿನ ಕುರಿತಾಗಿದ್ದರೆ ಮಾತ್ರ ಸರ್ವೋಚ್ಚ ನ್ಯಾಯಾಲಯದ ಈ ಮೂಲ ಪ್ರಾಧಿಕಾರವನ್ನು ಬಳಸಿಕೊಳ್ಳಬಹುದಾಗಿದೆ. ಅಂದಮಾತ್ರಕ್ಕೆ ಈ ನ್ಯಾಯಾಲಯದ ಈ ಪ್ರಾಧಿಕಾರಕ್ಕೆ ರಾಜಕೀಯ ಕುರಿತಾದ ವಿವಾದಗಳನ್ನು ನಿರ್ಣಯಕ್ಕಾಗಿ ಅಂಗೀಕರಿಸುವ ಅಧಿಕಾರವಿಲ್ಲ. ಕಾನೂನುಬದ್ಧ ಹಕ್ಕು ಎಂದರೆ ಕಾನೂನು ಮೂಲಕ ಗುರುತಿಸಲಾದ ಹಕ್ಕು ಎಂದರ್ಥ ಮತ್ತು ಸರಕಾರವು ತನ್ನ ಅಧಿಕಾರ ವ್ಯಾಪ್ತಿಯಲ್ಲಿ, ಪರಿಹಾರ ನೀಡಬಹುದಾಗಿದ್ದು ನ್ಯಾಯಾಲಯಗಳ ಅವಶ್ಯಕತೆ ಬೇಕಿಲ್ಲ.

ಸಂವಿಧಾನದ 32 ನೇ ಅನುಚ್ಛೇದವು ಸರ್ವೋಚ್ಚ ನ್ಯಾಯಾಲಯಕ್ಕೆ ಒಂದು ಅಧಿಕಾರವನ್ನು ನೀಡಿ ಯಾವುದೇ ವ್ಯಕ್ತಿಯ ಮೂಲಭೂತ ಹಕ್ಕುಗಳ ಉಲ್ಲಂಘನೆಯಾದರೆ, ಮತ್ತು ಅವನು ಸರ್ವೋಚ್ಚ ನ್ಯಾಯಾಲಯವನ್ನು ಪರಿಹಾರ ನೀಡುವಂತೆ ಕೋರಬಹುದಾಗಿದೆ. 32 ನೇ ಅನುಚ್ಛೇದದ (2) ನೇ ಖಂಡಕ್ಕನುಸಾರವಾಗಿ ಸರ್ವೋಚ್ಚ ನ್ಯಾಯಾಲಯವು ಸೂಕ್ತವಾದ ನಿರ್ದೇಶನಗಳನ್ನು ಆಜ್ಞೆಗಳನ್ನು ಅಲ್ಲದೆ ಅವಶ್ಯವಾದ ರಿಟ್ ನಿರ್ದೇಶನಗಳನ್ನೂ ನೀಡಬಹುದಾಗಿದೆ. ಅತ್ಯಂತ ತೀವ್ರತರವಾದ ಪರಿಹಾರವನ್ನು ಪಡೆಯುವಲ್ಲಿ ಸರ್ವೋಚ್ಚ ನ್ಯಾಯಾಲಯವನ್ನು ನೇರವಾಗಿ ಕೋರಬಹುದೆಂದು ಸಂವಿಧಾನದ 32 ನೇ ಅನುಚ್ಛೇದವು ಆದೇಶಿಸುತ್ತದೆ.

**ಸ್ಟೇಟ್ ಆಫ್ ಕರ್ನಾಟಕ Vs. ಯೂನಿಯನ್ ಆಫ್ ಇಂಡಿಯಾ** ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು 131 ನೇ ಅನುಚ್ಛೇದದ ಅಧಿಕಾರ ವ್ಯಾಪ್ತಿ ಮತ್ತು ಉಪಯುಕ್ತತೆ ಕುರಿತು ಚರ್ಚಿಸಿತು. ಈ ಪ್ರಕರಣದಲ್ಲಿ ಕೇಂದ್ರ ಸರಕಾರವು ರಾಜ್ಯ ಸರಕಾರದ ಮುಖ್ಯ ಮಂತ್ರಿಯು ಮತ್ತು ಅವನ ಮಂತ್ರಿ ಮಂಡಳದ ಕುರಿತು ವಿಚಾರಣಾ ಸಮಿತಿಯನ್ನು ನಿಯಮಿಸಲು ಆಜ್ಞಾಪಿಸಿದಾಗ ಅದನ್ನು ಕುರಿತು ರಾಜ್ಯ ಸರಕಾರದ ದಾವೆಯು ಸರ್ವೋಚ್ಚ ನ್ಯಾಯಾಲಯದಲ್ಲಿ ವಿಚಾರಣೆಗಾಗಿ ಅಂಗೀಕರಿಸಬಹುದೇ ? ಎಂಬುದಾಗಿತ್ತು. ಸರ್ವೋಚ್ಚ ನ್ಯಾಯಾಲಯವು ತನ್ನ ಬಹುಮತದ ನಿರ್ಣಯವನ್ನು ನೀಡುತ್ತ ರಾಜ್ಯ ಸರಕಾರದ ದಾವೆಯನ್ನು ಸರ್ವೋಚ್ಚ ನ್ಯಾಯಾಲಯವು ಅಂಗೀಕರಿಸಬಹುದೆಂದು ಆದೇಶಿಸಿತು. ನ್ಯಾಯಾಲಯದ ಅಭಿಪ್ರಾಯದಲ್ಲಿ ರಾಜ್ಯ ಮತ್ತು ರಾಜ್ಯ ಸರಕಾರಗಳೆರಡೂ ಒಂದೇ ಅಸ್ತಿತ್ವಗಳೆಂದು ಪರಿಗಣಿಸಲಾಯಿತು. ಆದ್ದರಿಂದ, ಸರಕಾರದ ಬೇಡಿಕೆ ರಾಜ್ಯದ ಬೇಡಿಕೆಯಾಗಿದೆ.

**b) ಉಚ್ಚ ನ್ಯಾಯಾಲಯದ ಮೇಲ್ಮನವಿ ಪ್ರಾಧಿಕಾರ**
**(Appellate jurisdiction in appeals from High Courts)**

ಸರ್ವೋಚ್ಚ ನ್ಯಾಯಾಲಯದ ಮೇಲ್ಮನವಿ ಪರಿಶೀಲಿಸುವ ಪ್ರಾಧಿಕಾರವನ್ನು ಈ ಕೆಳಗಿನ ನಾಲ್ಕು ವಿಧವಾಗಿ ವರ್ಗೀಕರಿಸಬಹುದಾಗಿದೆ.

i) ಸಂವಿಧಾನ ಕುರಿತ ವಿಷಯುಗಳಲ್ಲಿ;
ii) ಸಿವ್ಹಿಲ್ ವಿಷಯಗಳಲ್ಲಿ;
iii) ಕ್ರಿಮಿನಲ್ ವಿಷಯುಗಳಲ್ಲಿ; ಮತ್ತು
iv) ವಿಶೇಷ ವಿಷಯುಗಳ ವಿಷಯುದಲ್ಲಿ.

### i) ಸಂವಿಧಾನ ಕುರಿತು ವಿಷಯುಗಳಲ್ಲಿ
### (In Constitutional matters)

ಭಾರತದ ಸಂವಿಧಾನದ 132 ನೇ ಅನುಚ್ಛೇದದ (1) ನೇ ಖಂಡಕ್ಕನುಸಾರವಾಗಿ ಯಾವುದೇ ಉಚ್ಚ ನ್ಯಾಯಾಲಯುದ ನಿರ್ಣಯ, ಡಿಕ್ರಿ ಮತ್ತು ಕೊನೆಯ ಆಜ್ಞೆಯ ವಿರುದ್ಧ ಸಿವ್ಹಿಲ್ ಮತ್ತು ಕ್ರಿಮಿನಲ್ ವಿಷಯಗಳ ಮೇಲೆ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿದೆ. ಆದರೆ ಉಚ್ಚ ನ್ಯಾಯಾಲಯವು ಒಂದು ಪ್ರಮಾಣ ಪತ್ರವನ್ನು ನೀಡಬೇಕಾಗುತ್ತದೆ. ಅದರಲ್ಲಿ ಅದು ಈ ಪ್ರಕರಣದಲ್ಲಿ ಸಂವಿಧಾನ ಬದ್ಧವಾದ ಮತ್ತು ವಿಶ್ಲೇಷಿಸಬಹುದಾದ ಅವಶ್ಯಕತೆಯುಂಟು ಎಂಬುದಾಗಿ ತಿಳಿಸಬೇಕು. ಆದರೆ, ಒಂದು ವೇಳೆ ಉಚ್ಚ ನ್ಯಾಯಾಲಯವು ಅಂಥಹ ಪ್ರಮಾಣ ಪತ್ರವನ್ನು ನೀಡದಿದ್ದರೆ, ಸರ್ವೋಚ್ಚ ನ್ಯಾಯಾಲಯವೇ ವಿಶೇಷ ಅನುಮತಿಯನ್ನು ನೀಡಬೇಕಾಗುತ್ತದೆ. ಈ ಕೆಳಗಿನ ಮೂರು ವರ್ಗಗಳ ಷರತ್ತುಗಳನ್ನು ಪೂರೈಯಿಸಿದರೆ, ಉಚ್ಚನ್ಯಾಯಾಲಯವು ಸಾಮಾನ್ಯವಾಗಿ ಪ್ರಮಾಣಪತ್ರವನ್ನು ನೀಡುತ್ತದೆ.

a) ಯಾವುದೇ ನ್ಯಾಯಾಲಯುದ ಅಂತಿಮ ನಿರ್ಣಯ, ಡಿಕ್ರಿ ಮತ್ತು ಆಜ್ಞೆಯ ವಿರುದ್ಧ ಮಾಡಬಹುದಾದ ಮೇಲ್ಮನವಿ.

b) ಪ್ರಕರಣವು ಯಾವುದೇ ಸಂವಿಧಾನದ ಉಪಬಂಧಗಳ ಕಾನೂನು ವಿಶೇಷಣೆ ಕುರಿತಾಗಿದ್ದರೆ.

c) ಮೇಲ್ಮನವಿ ಸಲ್ಲಿಸಬಹುದಾದ ಪ್ರಕರಣವು ಯಾವುದೇ ಕಾನೂನು ಕುರಿತಾಗಿದ್ದರೆ.

ಸರ್ವೋಚ್ಚ ನ್ಯಾಯಾಲಯದ ಮುಂದೆ ಮಾಡಬಹುದಾದ ಈ ಮೇಲ್ಮನವಿಯಲ್ಲಿ ಮನವಿದಾರನು ಉಚ್ಚ ನ್ಯಾಯಾಲಯುದ ನಿರ್ಣಯದ ಯುಕ್ತಾಯುಕ್ತತೆಯನ್ನು ಪ್ರಶ್ನಿಸತಕ್ಕದ್ದಲ್ಲ. ಒಂದು ವೇಳೆ ಉಚ್ಚ ನ್ಯಾಯಾಲಯುದ ನಿರ್ಣಯವು ಅತ್ಯಂತ ತಪ್ಪಾಗಿದ್ದು ನ್ಯಾಯದಾನದಲ್ಲಿ ಅನ್ಯಾಯವಾಗಿದೆ ಎಂದು ಮೇಲ್ನೋಟಕ್ಕೆ ಗೋಚರಿಸುವಂತಿದ್ದರೆ, ಸರ್ವೋಚ್ಚ ನ್ಯಾಯಾಲಯವು ತನ್ನ ಮುಂದೆ ಮೇಲ್ಮನವಿ ಸಲ್ಲಿಸಲು ಅನುಮತಿಯನ್ನು ನೀಡುವುದು. ಉಚ್ಚ ನ್ಯಾಯಾಲಯವು ಮೇಲ್ಮನವಿ ಸಲ್ಲಿಸುವ ಬಗ್ಗೆ ಪ್ರಮಾಣಪತ್ರವನ್ನು ನೀಡಿದ ಮಾತ್ರಕ್ಕೆ ಸರ್ವೋಚ್ಚ ನ್ಯಾಯಾಲಯವು ಅದಕ್ಕೆ ಅವಕಾಶ ನೀಡಬೇಕೆಂಬ ಕಡ್ಡಾಯವೇನಿಲ್ಲ. ತನ್ನ ಅಭಿಪ್ರಾಯದಲ್ಲಿ ಪ್ರಕರಣವು ಮೇಲ್ಮನವಿ ಸಲ್ಲಿಸಲು ಯೋಗ್ಯ ಪ್ರಕರಣವಲ್ಲವೆಂದು ಅಭಿಪ್ರಾಯಪಟ್ಟರೆ, ಮೇಲ್ಮನವಿಯನ್ನು ಸರ್ವೋಚ್ಚ ನ್ಯಾಯಾಲಯವು ತಿರಸ್ಕರಿಸಬಹುದಾಗಿದೆ.

ii) **ಸಿವ್ಹಿಲ್ ಪ್ರಕರಣ ಕುರಿತು ಉಚ್ಚ ನ್ಯಾಯಾಲಯದ ನಿರ್ಣಯ ಮೇಲೆ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ**
( Appellate jurisdiction of Supreme Court in appeals from High Courts in regards to civil matters )

ಭಾರತದ ಸಂವಿಧಾನದ ತಿದ್ದುಪಡಿ ಅನುಚ್ಛೇದದ 133 ರ ಪ್ರಕಾರ ಉಚ್ಚ ನ್ಯಾಯಾಲಯದ ಯಾವುದೇ ಅಂತಿಮ ಆಜ್ಞೆ, ಡಿಕ್ರಿ ಅಥವಾ ನಿರ್ಣಯದ ಮೇಲೆ ಎಲ್ಲ ಸಿವ್ಹಿಲ್ ಮೊಕದ್ದಮೆ ವಿಷಯಗಳಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದಾಗಿದೆ. ಆದರೆ, ಅದಕ್ಕಾಗಿ ಉಚ್ಚ ನ್ಯಾಯಾಲಯದಿಂದ ಪ್ರಮಾಣ ಪತ್ರವು ಅತ್ಯಗತ್ಯ. ಉಚ್ಚ ನ್ಯಾಯಾಲಯವು ತನ್ನ ಪ್ರಮಾಣ ಪತ್ರದಲ್ಲಿ ಈ ಕೆಳಗಿನ ವಿಷಯಗಳನ್ನು ದೃಢೀಕರಿಸಬೇಕು.

a) ಮೇಲ್ಮನವಿ ಸಲ್ಲಿಸಬಹುದಾದ ಪ್ರಕರಣವು ಸಾಮಾನ್ಯವಾಗಿ ಮಹತ್ವ ದಾಗಿದ್ದು ಕಾನೂನು ಪ್ರಶ್ನೆಯು ಅಡಕವಾದದ್ದಿರುತ್ತದೆ; ಮತ್ತು

b) ಉಚ್ಚ ನ್ಯಾಯಾಲಯದ ಅಭಿಪ್ರಾಯದಲ್ಲಿ ಈ ಪ್ರಕರಣವನ್ನು ಸರ್ವೋಚ್ಚ ನ್ಯಾಯಾಲಯವು ನಿರ್ಣಯಿಸುವುದು ಅಗತ್ಯವಾಗಿದೆ.

ಇಂಥಹ ಪ್ರಕರಣಗಳಲ್ಲಿ ಎಷ್ಟು ಮೊತ್ತದ ಹಣದ ಪ್ರಶ್ನೆ ಉದ್ಭವಿಸಿರಬೇಕೆಂಬುದು ಅಪ್ರಸ್ತುತ. ಕೆಲವೊಂದು ವಿಷಯಗಳಲ್ಲಿ ಹಣದ ಮೊತ್ತ ಅತೀ ಚಿಕ್ಕದಿದ್ದರೂ ಅದರಲ್ಲಿ ಅಡಕವಾಗಿರುವ ಪ್ರಶ್ನೆಯು ಸಾರ್ವಜನಿಕ ದೃಷ್ಟಿಯಿಂದ ಅತ್ಯಂತ ಮಹತ್ವದಾಗಿದ್ದು ಸರ್ವೋಚ್ಚ ನ್ಯಾಯಾಲಯದಿಂದ ಅಂತಿಮ ನಿರ್ಣಯವು ಆ ಸಮಸ್ಯೆಗೆ ಸೂಕ್ತವಾದ ಪರಿಹಾರವನ್ನೊದಗಿಸುತ್ತದೆಂಬ ಭಾವನೆಯು ವ್ಯಕ್ತಪಡುವಂತಿದ್ದರೆ, ಸರ್ವೋಚ್ಚ ನ್ಯಾಯಾಲಯವು ಅಂಥಹ ಪ್ರಕರಣಕ್ಕೆ ಸಂಬಂಧಿಸಿದ ಮೇಲ್ಮನವಿಯನ್ನು ಸ್ವೀಕರಿಸುತ್ತದೆ.

ಉಚ್ಚ ನ್ಯಾಯಾಲಯದ ಪ್ರಮಾಣ ಪತ್ರವನ್ನು ಹಕ್ಕು ಬದ್ಧವಾಗಿ ಕೇಳಲಾಗದು. ಅದು ಉಚ್ಚ ನ್ಯಾಯಾಲಯದ ನಿರ್ಣಯಕ್ಕೆ ಬಿಟ್ಟ ವಿಷಯ. ಆದರೆ ಉಚ್ಚ ನ್ಯಾಯಾಲಯದ ಈ ವಿಷಯ ಕುರಿತಾದ ನಿರ್ಣಯವು ತರ್ಕಬದ್ಧವಾಗಿರಬೇಕು ಮತ್ತು ತತ್ಕಾಲದಲ್ಲಿ ಜಾರಿಯಲ್ಲಿದ್ದ ಕಾನೂನಿಗನ್ವಯವಾಗಿರತಕ್ಕದ್ದು. ಅದೂ ಅಲ್ಲದೆ, ಕೇವಲ ಉಚ್ಚ ನ್ಯಾಯಾಲಯವು ಪ್ರಮಾಣ ಪತ್ರವನ್ನು ನೀಡಿದ್ದ ಮಾತ್ರಕ್ಕೆ ಸರ್ವೋಚ್ಚ ನ್ಯಾಯಾಲಯವು ಮೇಲ್ಮನವಿಯನ್ನು ಸ್ವೀಕರಿಸಬೇಕೆಂಬ ಕಡ್ಡಾಯವೇನಿಲ್ಲ.

iii) **ಕ್ರಿಮಿನಲ್ ಪ್ರಕರಣಗಳಲ್ಲಿ ಸರ್ವೋಚ್ಚ ನ್ಯಾಯಾಲಯದ ಮೇಲ್ಮನವಿ ಪ್ರಾಧಿಕಾರ** ( Appellate jurisdiction of Supreme Court in regard to Criminal matters )

ಭಾರತ ಸಂವಿಧಾನದ 134 ನೇ ಅನುಚ್ಛೇದದ ಪ್ರಕಾರ, ಯಾವುದೇ ಉಚ್ಚ ನ್ಯಾಯಾಲಯದ ಕ್ರಿಮಿನಲ್ ಪ್ರಕರಣದ ಅಂತಿಮ ನಿರ್ಣಯ ಅಥವಾ ಶಿಕ್ಷೆಯ

ಕುರಿತು ಸರ್ವೋಚ್ಚ ನ್ಯಾಯಾಲಯಕ್ಕೆ ಈ ಕೆಳಗಿನ ಎರಡು ಸಂದರ್ಭಗಳಲ್ಲಿ ಮೇಲ್ಮನವಿಯನ್ನು ಸಲ್ಲಿಸಬಹುದಾಗಿದೆ.

a) ಉಚ್ಚ ನ್ಯಾಯಾಲಯದ ಪ್ರಮಾಣಪತ್ರವಿಲ್ಲದೆ;

b) ಉಚ್ಚ ನ್ಯಾಯಾಲಯದ ಪ್ರಮಾಣ ಪತ್ರ ಪಡೆದುಕೊಂಡು.

ಸಂವಿಧಾನದ 134 ನೇ ಅನುಚ್ಛೇದದ (ಎ) ಮತ್ತು (ಬಿ) ಖಂಡಗಳಿಗನುಸಾರವಾಗಿ ಉಚ್ಚ ನ್ಯಾಯಾಲಯಕ್ಕೆ ಈ ಕೆಳಗಿನ ಎರಡು ಸಂದರ್ಭಗಳಲ್ಲಿ ಮೇಲ್ಮನವಿಯನ್ನು ಸಲ್ಲಿಸಬಹುದಾಗಿದೆ.

i) ಕೆಳನ್ಯಾಯಾಲಯದ ಬಿಡುಗಡೆ ಮೇಲೆ ಸಲ್ಲಿಸಲಾದ ಮೇಲ್ಮನವಿಯನ್ನು ವಿಚಾರಿಸಿ ಉಚ್ಚ ನ್ಯಾಯಾಲಯವು ಮರಣದಂಡನೆಯನ್ನು ವಿಧಿಸಿದ್ದರೆ,

ii) ತನ್ನ ಪ್ರಾಧಿಕಾರಕ್ಕೆ ಸೇರಿದ ಯಾವುದೇ ನ್ಯಾಯಾಲಯದಲ್ಲಿ ನಡೆಯುತ್ತಿರುವ ವಿಚಾರಣೆಯನ್ನು ತನ್ನ ಕಡೆಗೆ ತೆಗೆದುಕೊಂಡು ಅಪರಾಧಿಗೆ ಮರಣ ದಂಡನೆಯನ್ನು ವಿಧಿಸಿದರೆ.

ಆದರೆ, ಅಪರಾಧಿಗೆ ವಿಧಿಸಲಾದ ದಂಡನೆಯನ್ನು ತಳ್ಳಿ ಹಾಕಿ ಉಚ್ಚ ನ್ಯಾಯಾಲಯವು ಬಿಡುಗಡೆ ಆಜ್ಞೆಯನ್ನು ನೀಡಿದ್ದರೆ, ಉಚ್ಚ ನ್ಯಾಯಾಲಯದ ಪ್ರಮಾಣ ಪತ್ರವಿಲ್ಲದೆ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಲಿಕ್ಕಾಗದು.

ಸರ್ವೋಚ್ಚ ನ್ಯಾಯಾಲಯದಿಂದ ನಿರ್ಣಯಿಸಲು ಅರ್ಹ ಪ್ರಕರಣವೆಂದು ಉಚ್ಚ ನ್ಯಾಯಾಲಯವು ಪ್ರಮಾಣ ಪತ್ರವನ್ನು ನೀಡಿದರೆ, ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಲಿಕ್ಕಾಗದು.

ಸರ್ವೋಚ್ಚ ನ್ಯಾಯಾಲಯದಿಂದ ನಿರ್ಣಯಿಸಲು ಅರ್ಹ ಪ್ರಕರಣವೆಂದು ಉಚ್ಚ ನ್ಯಾಯಾಲಯವು ಪ್ರಮಾಣ ಪತ್ರವನ್ನು ನೀಡಿದರೆ, ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿದೆ. ಕ್ರಿಮಿನಲ್ ಮೊಕದ್ದಮೆಗಳಲ್ಲಿ ಈ ರೀತಿಯಾದ ಪ್ರಮಾಣ ಪತ್ರ ನೀಡುವ ಉಚ್ಚ ನ್ಯಾಯಾಲಯದ ಅಧಿಕಾರವು ಅದರ ಸ್ವಂತ ನಿರ್ಣಯಕ್ಕೆ ಬಿಟ್ಟ ವಿಷಯ. ಆದರೆ, ಅದು ತತ್ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಕಾನೂನುಗಳಿಗೆ ಸಮ್ಮತವಾಗಿರಬೇಕು. ಅತ್ಯಂತ ವಿಶೇಷ ಪ್ರಕರಣಗಳಲ್ಲಿ ಮಾತ್ರ ಉಚ್ಚ ನ್ಯಾಯಾಲಯವು ಪ್ರಮಾಣ ಪತ್ರವನ್ನು ನೀಡುತ್ತದೆ.

### iv) ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಲು ಪ್ರಮಾಣ ಪತ್ರ (Certificate for appeal to Supreme Court)

132 ನೇ ಅನುಚ್ಛೇದದ (1) ನೇ ಖಂಡ ಅಥವಾ 133 ನೇ ಅನುಚ್ಛೇದದ, (1) ನೇ ಖಂಡ ಅಥವಾ 134ನೇ ಅನುಚ್ಛೇದದ (1) ನೇ ಖಂಡದಲ್ಲಿ ಉಲ್ಲೇಖಿತವಾದ ಒಂದು ತೀರ್ಪು, ಡಿಕ್ರಿ ಅಂತಿಮ ಆದೇಶ, ದಂಡಾದೇಶ ಮಾಡುವ ಅಥವಾ ಕೊಡುವ ಪ್ರತಿಯೊಂದು ಉಚ್ಚ ನ್ಯಾಯಾಲಯವು—

ಎ) ತನಗೆ ಸಮಾಧಾನವೆಂದು ಕಂಡರೆ ತನ್ನದೇ ಆದ ಸೂಚನೆಯ ಮೇರೆಗೆ; ಮತ್ತು

ಬಿ) ಅಂತಹ ತೀರ್ಪು, ಡಿಕ್ರಿ, ಅಂತಿಮ ಆದೇಶ, ದಂಡಾದೇಶ ಕೊಟ್ಟ ಕ್ಷಣದಿಂದ ನಷ್ಟಕ್ಕೊಳಗಾದ ವ್ಯಕ್ತಿ ಅಥವಾ ವ್ಯಕ್ತಿಯ ಪರವಾಗಿ ಮನವಿಯನ್ನು ಸಲ್ಲಿಸಿದರೆ, ಸಾಧ್ಯವಾದಷ್ಟು ಬೇಗ 132ನೇ ಅನುಚ್ಛೇದದ (1)ನೇ ಖಂಡ ಅಥವಾ 133ನೇ ಅನುಚ್ಛೇದದ (1)ನೇ ಖಂಡದಲ್ಲಿ ಉಲ್ಲೇಖಿಸಲ್ಪಟ್ಟ ಪ್ರಮಾಣ ಪತ್ರವನ್ನು ಕೊಡಬಹುದೋ ಎಂಬ ಬಗ್ಗೆ ನಿರ್ಣಯಿಸಲಾಗುವುದು.

**v) ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಲು ವಿಶೇಷ ಅನುಮತಿ (Special leave to appeal to Supreme Court)**

ಭಾರತದ ಸಂವಿಧಾನದ 136 ನೇ ಅನುಚ್ಛೇದದ ಪ್ರಕಾರ, ಸಂವಿದಾನವು ಸರ್ವೋಚ್ಚ ನ್ಯಾಯಾಲಯಕ್ಕೆ ಈ ಕೆಳಗಿನ ಸಂದರ್ಭಗಳಲ್ಲಿ ವಿಶೇಷ ಮೇಲ್ಮನವಿ ಸಲ್ಲಿಸಲು ಸಮ್ಮತಿಯನ್ನು ನೀಡುವ ಅಧಿಕಾರವನ್ನು ನೀಡಿದೆ.

ಎ) ಯಾವುದೇ ನ್ಯಾಯಾಲಯದ ನಿರ್ಣಯ, ಡಿಕ್ರಿ, ದಂಡಾದೇಶ ಅಥವಾ ಆದೇಶದ ಮೇಲೆ;

ಬಿ) ಭಾರತದ ರಾಷ್ಟ್ರಕ್ಷೇತ್ರದಲ್ಲಿರುವ ಯಾವುದೇ ನ್ಯಾಯಾಲಯ ಅಥವಾ ಟ್ರಿಬ್ಯೂನಲ್‌ವು ಯಾವುದೇ ಪ್ರಕರಣ ಅಥವಾ ವಿಷಯ ಕುರಿತು ನೀಡಲಾದ ನಿರ್ಣಯದ ಮೇಲೆ.

ಈ ಅನುಚ್ಛೇದವು ಅತ್ಯಂತ ವಿಶಾಲವಾದ ಅಧಿಕಾರವನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ನೀಡಿದೆ. ಸಾಮಾನ್ಯ ಕಾನೂನುಗಳಿಂದ ನೀಡಲಸಾಧ್ಯವಾದ ಒಂದು ಅಧಿಕಾರವನ್ನು ಸರ್ವೋಚ್ಚ ನ್ಯಾಯಾಲಯವು ಹೊಂದಿರಬೇಕೆಂಬ ವಿಚಾರ ದಿಂದ ಈ ಅಧಿಕಾರವನ್ನು ಅದಕ್ಕೆ ನೀಡಲಾಗಿದೆ.

ಸರ್ವೋಚ್ಚ ನ್ಯಾಯಾಲಯದ ಈ ಅಧಿಕಾರ ವ್ಯಾಪ್ತಿಯನ್ನು ಮೇಲಿಂದ ಮೇಲೆ ಕ್ರಿಮಿನಲ್ ಪ್ರಕರಣಗಳಲ್ಲಿ ಬಳಸಿಕೊಳ್ಳಲಾಗುತ್ತಿದೆ. ಅದೂ ಅಲ್ಲದೆ ಅಪ ರಾಧಿಗೆ ಅತ್ಯಂತ ಹೀನಾಯವಾದ ಅನ್ಯಾಯವಾಗಿದೆ ಎಂದು ಕಂಡು ಬಂದರೆ, ಅಥವಾ ವಿಶೇಷವಾದ ಸಂದರ್ಭಗಳಲ್ಲಿ ಸರ್ವೋಚ್ಚನ್ಯಾಯಾಲಯದ ಈ ಅಧಿಕಾರ ವ್ಯಾಪ್ತಿಯನ್ನು ಬಳಸಿಕೊಳ್ಳಲಾಗುತ್ತದೆ.

ಸಂವಿಧಾನದ ಈ 136ನೇ ಅನುಚ್ಛೇದವು ಸರ್ವೋಚ್ಚ ನ್ಯಾಯಾಲಯಕ್ಕೆ ಒಂದು ಅಧಿಕಾರವನ್ನು ನೀಡಿ ಭಾರತದ ರಾಷ್ಟ್ರಕ್ಷೇತ್ರದಲ್ಲಿಯ ಯಾವುದೇ ಟ್ರಿಬ್ಯೂನಲ್ ನೀಡಿದ ಆದೇಶದ ವಿರುದ್ಧ ಕೂಡ ಮನವಿಯನ್ನು ಸಲ್ಲಿಸಲು ಅನುಮತಿಯನ್ನು ನೀಡುವ ಅಧಿಕಾರವನ್ನು ನೀಡುತ್ತದೆ. ಆದರೆ, ಆದೇಶ ನೀಡುವ ಟ್ರಿಬ್ಯೂನಲ್ ಅರೆನ್ಯಾಯಿಕ ಲಕ್ಷಣಗಳನ್ನು ಹೊಂದಿರಬೇಕಾದ ಅವಶ್ಯಕತೆ ಇರುತ್ತದೆ.

ಕ್ಲರ್ಕ್ ಆಫ್ ಕಲಕತ್ತಾ ಟ್ರಾಮವೇ Vs. ಕಲಕತ್ತಾ ಟ್ರಾಮವೇ ಕಂಪನಿ ಲಿಮಿಟೆಡ್ ಪ್ರಕರಣವನ್ನು ನಿರ್ಣಯಿಸುತ್ತ ಸರ್ವೋಚ್ಚ ನ್ಯಾಯಾಲಯವು ಟ್ರಿಬ್ಯೂನಲ್ ನೀಡಿದ ಆದೇಶದ ವಿರುದ್ಧವಾಗಿ ಈ ಕೆಳಗಿನ ಸಂದರ್ಭಗಳಲ್ಲಿ ಸಾಮಾನ್ಯವಾಗಿ ಹಸ್ತಕ್ಷೇಪವನ್ನು ಮಾಡುತ್ತದೆಂದು ತಿಳಿಸಿದೆ.

i) ಟ್ರಿಬ್ಯೂನಲ್ ತನ್ನ ಪ್ರಾಧಿಕಾರವನ್ನು ಮಿಕ್ಕಿ ಕಾರ್ಯ ನಿರ್ವಹಿಸಿದ್ದರೆ, ಅಥವಾ ನ್ಯಾಯ ಸಮ್ಮತವಾಗಿ ಕಾರ್ಯ ನಿರ್ವಹಿಸುವಲ್ಲಿ ವಿಫಲವಾಗಿದ್ದರೆ;

ii) ಟ್ರಿಬ್ಯೂನಲ್ ನೀಡಿದ ನಿರ್ಣಯವು ಅತ್ಯಂತ ಸ್ಪಷ್ಟವಾಗಿ ತಪ್ಪು ಎಂದು ಗೋಚರಿಸುವಂತಿದ್ದರೆ,

iii) ಟ್ರಿಬ್ಯೂನಲ್ ಆದೇಶವನ್ನು ನೀಡುವಾಗ ನೈಸರ್ಗಿಕ ನ್ಯಾಯಿಕ ನಿಯಮ ಉಲ್ಲಂಘಿಸಿ ಅತ್ಯಂತ ಅನ್ಯಾಯ ಮಾಡಿದಂತಿದ್ದರೆ;

iv) ಪ್ರಾಧಿಕಾರಕ್ಕೆ ಕುರಿತಾದ ಮತ್ತು ಸರ್ವಸಮ್ಮತವಾದ ನಿಯಮಗಳನ್ನು ತಪ್ಪು ತಪ್ಪಾಗಿ ಉಪಯೋಗಿಸಿಕೊಂಡು ನಿರ್ಣಯಿಸಿದ್ದರೆ.

### (vi) ತನ್ನ ನಿರ್ಣಯಗಳನ್ನು ಪುನರ್ ವಿಮರ್ಶಿಸು ಅಧಿಕಾರ (Review of its own judgement by the Supreme Court)

ಸಂವಿಧಾನದ 137 ನೇ ಅನುಚ್ಛೇದವು ಸರ್ವೋಚ್ಚ ನ್ಯಾಯಾಲಯಕ್ಕೆ ಒಂದು ಅಧಿಕಾರವನ್ನು ನೀಡಿ ತಾನೇ ನೀಡಿದ ಆದೇಶಗಳನ್ನು ಪುನರ್‌ವಿಮರ್ಶಿಸುವ ಅಧಿಕಾರವಿದೆ ಎಂದು ತಿಳಿಸುತ್ತದೆ. ಅಂತೆಯೇ, ಸರ್ವೋಚ್ಚ ನ್ಯಾಯಾಲಯದ ನಿರ್ಣಯಗಳು ಎಲ್ಲ ನ್ಯಾಯಾಲಯಗಳನ್ನೂ ಬಾಧ್ಯಗೊಳಿಸುತ್ತವಾದರೂ, ಅದಕ್ಕೆ ತನ್ನದೇ ನಿರ್ಣಯಗಳ ಯಾವ ಬಾಧ್ಯತೆಯೂ ಇಲ್ಲ. ಅದಕ್ಕಾಗಿಯೇ, ಭಾರತದಲ್ಲಿ ಸ್ಟೇರ ಡೇಸಿಸ್ ಸಿದ್ಧಾಂತಕ್ಕೆ ಅಷ್ಟೊಂದು ಮನ್ನಣೆ ನಿಡುವುದಿಲ್ಲ.

## 17. ಭಾರತದಲ್ಲಿ ಕಾನೂನು ಕ್ರೋಢೀಕರಣ (Codification of law in India)

ವಿಶಾಲಭಾರತವನ್ನೂ ಹಲವಾರು ರಾಜರು ಹಲವಾರು ವರ್ಷ ಆಳಿದ ಪರಿಣಾಮವಾಗಿ ಅವರವರ ಇಚ್ಛಾನುಸಾರವಾದ ಕಾನೂನುಗಳು ದೇಶದ ವಿವಿಧ ಭಾಗಗಳಲ್ಲಿ ಅಸ್ತಿತ್ವದಲ್ಲಿದ್ದವು. ಅವರವರ ಇಚ್ಛಾನುಸಾರವಾದ ಕಾನೂನುಗಳು ದೇಶದ ವಿವಿಧ ಭಾಗಗಳಲ್ಲಿ ಅಸ್ತಿತ್ವದಲ್ಲಿದ್ದವು ಇದೇ ಸಮಯದಲ್ಲಿ ಬ್ರಿಟಿಶ್ ಸರಕಾರದ ಆಗಮನದೊಂದಿಗೆ ಇಂಗ್ಲಂಡದ ಕಾನೂನುಗಳು ಭಾರತೀಯ ಕಾನೂನುಗಳೊಂದಿಗೆ ಸಮಾವೇಶಗೊಂಡು ಹಲವಾರು ರೀತಿಯ ಗೊಂದಲಕ್ಕೆ ಕಾರಣವಾಯಿತು. ಭಾರತವು ಅನೇಕ ಜಾತೀಯ ಜನರನ್ನೊಳಗೊಂಡ ಹಲವಾರು ಮತಪಂತಗಳಿಂದೊಡಗೂಡಿದ ಸಮಾಜದಿಂದಾಗಿ ಅನೇಕ ರೀತಿಯ ಸಂಸ್ಕೃತಿಗಳು ಪ್ರಚಲಿತದಲ್ಲಿದ್ದು ಅದಕ್ಕನುಗುಣವಾದ ಕಾನೂನು ಪದ್ಧತಿಗಳು ಬಳಕೆಯಲ್ಲಿದ್ದವು. ಇದರಿಂದಾಗಿ, ಇಡೀ ದೇಶಕ್ಕೆ ಅನ್ವಯಿಸಬಹುದಾದ ಒಂದೇ ರೀತಿಯ ಕಾನೂನು ಅವಶ್ಯಕತೆ ಅತೀಯಾಗಿತ್ತು. ರಾಜ ಸನ್ನದು ಕಾಯ್ದೆ, 1833 ಕ್ರೋಢೀಕರಣದ ಬಗ್ಗೆ

ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿತು. ನಾಲ್ಕನೇಯ ಕಾನೂನು ಸಮಿತಿಯು ಕ್ರೋಢೀಕರಣ ಕಾರ್ಯವನ್ನು ಸಾವಕಾಶವಾಗಿ ಪ್ರಾರಂಭಿಸಿತು. ಅಂತೆಯೇ ಈ ದಿಸೆಯಲ್ಲಿ ಚಾಲನೆಯು ದೊರಕಿತು. ಸಮಿತಿಯು ಕ್ರೋಢೀಕರಣವು ಯಾವ ರೀತಿಯಲ್ಲಾಗಬೇಕು ? ಯಾವ ತಳಹದಿಯನ್ನಾಧರಿಸಬೇಕು ? ಎಂಬ ಬಗ್ಗೆ ರೂಪುರೇಷೆಗಳನ್ನು ನಿರೂಪಿಸಿತು.

1880 ರ ಅಂತ್ಯದವರೆಗೆ ಹಲವಾರು ಶಾಸನಗಳು ಅಸ್ತಿತ್ವದಲ್ಲಿ ಬಂದವು. ಇಲ್ಬರ್ಟ್ ಎಂಬ ನ್ಯಾಯ ಶಾಸ್ತ್ರಜ್ಞರ ಮಾತಿನಲ್ಲಿ ಹೇಳುವುದಾದರೆ, ಭಾರತದಲ್ಲಿ ಕಾನೂನು ಕ್ರೋಢೀಕರಣ ಕಾರ್ಯವು ಹಲವಾರು ಕಾನೂನು ಸಮಿತಿಗಳ ಸಹಾಯದಿಂದ ಮುನ್ನಡೆಯುತ್ತಲಿದೆ. ಇನ್ನೂ ಮುಂದೆ ಸ್ಥಾನಿಕ ಕಾನೂನುಗಳ ಕ್ರೋಢೀಕರಣ ಕಾರ್ಯವು ಇನ್ನೂ ಆಗಬೇಕಿದೆ. ಆದರೆ, ಅದಕ್ಕಾಗಿ ಹಲವಾರು ಸಮಸ್ಯೆಗಳೆದುರಾಗುವ ಸಂಭವವುಂಟು. ಈ ಕಾರ್ಯವು ಭಾರತದ ಪ್ರಜೆಗಳ ಮತ್ತು ಸ್ಥಾನಿಕ ನ್ಯಾಯವಾದಿಗಳ ಸಹಕಾರಸಹಯೋಗವಿಲ್ಲದೆ ಸಾಧ್ಯವಿಲ್ಲ. ಪ್ರಸಕ್ತ ಕಾನೂನು ಮತ್ತು ಅವುಗಳಲ್ಲಿ ಅಗತ್ಯವಾದ ಬದಲಾವಣೆಗೆ ಅತ್ಯಂತ ಶ್ರಮದಾಯಕ ಕಾರ್ಯವಾಗಿರುತ್ತದೆ.

ಭಾರತೀಯ ಪರಿಸ್ಥಿತಿಗನುಸರಿಸಿ, ಇಲ್ಲಿಯ ಪ್ರಕರಣಗಳಿಗೆ ಅನ್ವಯವಾಗುವ ರೀತಿಯಲ್ಲಿ ಕ್ರೋಢೀಕರಿಸಿದ ಹಲವಾರು ಕಾನೂನುಗಳು ಈ ಕೆಳಗಿನಂತಿವೆ.

i) ಭಾರತೀಯ ದಂಡ ಸಂಹಿತೆ (Indian Penal Code)
ii) ಕ್ರಿಮಿನಲ್ ಪ್ರಾಕ್ರಿಯ ಸಂಹಿತೆ (Criminal Procedure Code)
iii) ದೀವಾಣೀ ಪ್ರಾಕ್ರಿಯಾ ಸಂಹಿತೆ (Civil Probedure Code)
iv) ಭಾರತೀಯ ನಿರ್ಭಂಧನಾ ಕಾನೂನು (Indian Lemitation Act)
v) ಭಾರತೀಯ ಉತ್ತರಾಧಿಕಾರ ಕಾಯ್ದೆ (Indian Succession Act)
vi) ಭಾರತೀಯ ಕರಾರು ಅಧಿನಿಯಮ (Indian Contract Act)
vii) ಭಾರತೀಯ ಸಾಕ್ಷಿ ಅಧಿನಿಯಮ (Indian Evidence Act)

ಕ್ರೋಢೀಕರಣದಿಂದಾಗಿ ಭಾರತದ ಜನತೆ ಭಾರತದಲ್ಲಿ ಪ್ರಚಲಿತದಲ್ಲಿದ್ದ ಹಲವಾರು ಕಾನೂನುಗಳ ಬಗ್ಗೆ ನಿಶ್ಚಿತವಾದ ಜ್ಞಾನವನ್ನು ಹೊಂದಿದಂತಾಯಿತು, ಒಂದಕ್ಕೊಂದು ವಿರೋಧಾಭಾಸದ ಕಾನೂನುಗಳನ್ನು ಪರಿಸ್ಥಿತಿಗೆ ತಕ್ಕಂತೆ ಬದಲಾವಣೆಯನ್ನು ಮಾಡಿದುದರಿಂದಾಗಿ ಹಲವಾರು ನಿಯಮಗಳ ಡೋಲಾಯಮಾನ ಪದ್ಧತಿಯು ಕೊನೆಗೊಡಿತು. ನ್ಯಾಯಾಲಯಗಳ ನ್ಯಾಯನಿರ್ವಹಣೆ ಕಾರ್ಯವು ಸುಗಮವಾಯಿತು.

ಕಾನೂನು ಕ್ರೋಢೀಕರಣ ಕಾರ್ಯವು ಪದ್ಧತೀ ಕಾನೂನು ಕುರಿತು ಹಲವಾರು ಸಮಸ್ಯೆಗಳನ್ನು ಒಡ್ಡಿತು. ಭಾರತವು ಹಲವಾರು ಸಂಸ್ಕೃತಿ ಜಾತಿ ಧರ್ಮ

ಗಳಿಗೆ ಮನ್ನಣೆ ನೀಡಿರುವ ಕಾರಣದಿಂದ ಆಯಾ ಧರ್ಮ ಜಾತಿಗಳಿಗನುಸಾರವಾಗಿ ಹಲವಾರು ಪದ್ಧತೀ ನಿಯಮಗಳು ಬಳಕೆಯಲ್ಲಿದ್ದವು. ಈ ಪದ್ಧತೀ ಕಾನೂನು ಗಳು ಸಾಮಾನ್ಯವಾಗಿ ಒಂದಕ್ಕೊಂದು ವಿರುದ್ಧವಾದವುಗಳಾಗಿದ್ದವು. ಯಾಕೆಂದರೆ ಪ್ರತಿಯೊಂದು ಪದ್ಧತೀ ಕಾನೂನು ಆಯಾ ಜಾತಿಯ ಜನರ ಪದ್ಧತಿಗನುಸಾರವಾಗಿ ಬೆಳೆದು ಬಂದುದಾಗಿತ್ತು. ಅವುಗಳ ಮೂಲಗಳೂ ಬೇರೆ ಬೇರೆಯಾಗಿರುವುದರಿಂದ ಪದ್ಧತೀ ಕಾನೂನುಗಳು ಬೇರೆ ಬೇರೆಯಾಗಿದ್ದವು. ಆಯಾ ಧರ್ಮಕ್ಕನುಸಾರವಾದ ಪದ್ಧತೀ ನಿಯಮಗಳನ್ನು ಒಂದುಗೂಡಿಸಿ ಕ್ರೋಢೀಕರಿಸಬೇಕೋ ? ಅಥವಾ ಹಲವಾರು ಪದ್ಧತೀ ಕಾನೂನುಗಳಿಗೆ ಸಮನ್ವಯವಾಗುವ ರೀತಿಯಲ್ಲಿ ಕಾನೂನು ನಿರೂಪಿಸಿ ಕ್ರೋಢೀಕರಿಸಬೇಕೋ ಎಂಬುದು ಕ್ರೋಢೀಕರಣಕ್ಕೆ ಪ್ರಮುಖ ಸವಾಲಾಗಿತ್ತು. 19 ನೇ ಶತಮಾನಾವಧಿಯಲ್ಲಿ ಅನೇಕ ಶಾಸನಗಳು ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಅಸ್ತಿತ್ವದಲ್ಲಿದ್ದ ಪದ್ಧತೀ ಕಾನೂನುಗಳನ್ನು ಗುರುತಿಸಿ ಮನ್ನಿಸಿ ನ್ಯಾಯಾಲಯಗಳು ಅವುಗಳಿಗೆ ಅನುಗುಣವಾಗಿ ನ್ಯಾಯದಾನವನ್ನು ಮಾಡುವಂತೆ ನಿರ್ದೇಶಿಸಿದ್ದವು. ಇದಲ್ಲದೆ, ಪದ್ಧತೀ ಕಾನೂನುಗಳು ಶಾಸನಬದ್ಧ ಕಾನೂನಕ್ಕೆ ವಿರುದ್ಧವಾಗಿದ್ದರೆ ಪದ್ಧತೀ ಕಾನೂನಕ್ಕೆ ಹೆಚ್ಚಿನ ಮಹತ್ವವನ್ನು ನೀಡಬೇಕೆಂಬುದು ಅವುಗಳ ಇಂಗಿತವಾಗಿತ್ತು. **ಕಲೆಕ್ಟರ ಆಫ್ ಮದ್ರಾಸ Vs. ಮುಟ್ಟೊ ರಾಮಲಿಂಗ ಸತ್ಪತೀ** ಪ್ರಕರಣವನ್ನು ನಿರ್ಣಯಿಸುತ್ತ ಹಿಂದೂ ಕಾನೂನಿಗನ್ವಯವಾಗಿ ಅತ್ಯಂತ ಸ್ಫುಟವಾದ ಪದ್ಧತೀ ಕಾನೂನು ಶಾಸನಬದ್ಧ ಕಾನೂನಿಗಿಂಥ ಹಿರಿಮೆಯುದಾಗಿರುತ್ತದೆಂದು ನಿರ್ದೇಶಿಸಿತು.

ಈ ರೀತಿಯಾದ ಅನೇಕ ಪದ್ಧತೀ ಕಾನೂನುಗಳನ್ನು ಕ್ರೋಢೀಕರಿಸಿದ ಹಲವಾರು ಪದ್ಧತೀ ಕಾನೂನುಗಳು ಅಸ್ತಿತ್ವದಲ್ಲಿ ಬಂದವು. ಪದ್ಧತೀ ಕಾನೂನು ಗಳಿಗೆ ಪೂರಕವಾಗಿ ಅನೇಕ ಶಾಸನಬದ್ಧ ಕಾನೂನುಗಳನ್ನು ರಚಿಸಿ ಆಯಾ ಧರ್ಮದ ಜನರಿಗೆ ಅನ್ವಯವಾಗುವ ಹಲವಾರು ಕಾನೂನುಗಳು ನಿರ್ಮಿಸಲ್ಪಟ್ಟವು.

i) ಹಿಂದೂ ಕಾನೂನು (Hindu Law)
ii) ಮುಸ್ಲೀಮ ಕಾನೂನು (Mohammadan Law)
iii) ಹಿಂದೂ ಉತ್ತರಾಧಿಕಾರಿ ಕಾಯ್ದೆ (Hindu Succession Act)
iv) ಹಿಂದೂ ವಿವಾಹದ ಕಾಯ್ದೆ (Hindu Marriage Act)

ಈ ರೀತಿಯಾದ ಕಾನೂನು ಕ್ರೋಢೀಕರಣದಲ್ಲಿ ಸ್ಥಾನಿಕ ಮತ್ತು ಕೌಟುಂಬಿಕ ಪದ್ಧತೀ ಕಾನೂನುಗಳನ್ನು ಗಮನದಲ್ಲಿರಿಸಿಕೊಂಡು ಕ್ರೋಢೀಕರಿಸಲಾಯಿತು.

## 18. ಭಾರತದಲ್ಲಿ ಕಾನೂನು ವರದಿ (Law reporting in India)

ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯು ಆ ರಾಷ್ಟ್ರದ ಎಲ್ಲ ಕಾನೂನು ತಿಳಿದು ಕೊಂಡಿರುವುದು ಅತ್ಯವಶ್ಯ. ಅಂತೆಯೇ, ಕಾನೂನಿನ ಅಜ್ಞಾನತೆ ಕ್ಷಮಾರ್ಹವಲ್ಲ (Ignorantia jun's non-excusat). ಆದರೆ, ಈ ಮಾತಿನ ತಾತ್ವಿಕತೆ ಯನ್ನು ಅನ್ವಯಿಸಬೇಕಿದ್ದರೆ, ಸರಕಾರವು ತನ್ನ ಶಾಸನಗಳನ್ನು ಸಾರ್ವಜನಿಕರ

ಗಮನಕ್ಕೆ ತರುವ ಕ್ರಮಕೈಕೊಳ್ಳುವುದು ಅದರ ನೈತಿಕ ಮತ್ತು ಕಾನೂನು ಬದ್ಧ ಹೊಣೆಗಾರಿಕೆಯಾಗಿರುತ್ತದೆ. ಅದಕ್ಕಾಗಿ ಕಾನೂನು ವರದಿ ಅತ್ಯವಶ್ಯ.

ಸಾಮಾನ್ಯವಾಗಿ ಪ್ರಕರಣಗಳು ಕೆಳ ನ್ಯಾಯಾಲಯದ ಮುಂದೆ ಪ್ರಸ್ತಾಪಿಸಲ್ಪಟ್ಟು ವಾದಿ ಪ್ರತಿವಾದಿಗಳ ವಾದ ವಿವಾದಗಳ ಹಿನ್ನಲೆಯಲ್ಲಿ ನ್ಯಾಯಾಧೀಶನು ತನ್ನ ವಿವೇಚನಾ ಸಾಮರ್ಥ್ಯಕ್ಕನುಗುಣವಾಗಿ ನ್ಯಾಯ ನಿರ್ಣಯ ನೀಡುತ್ತಾನೆ. ಆ ನಿರ್ಣಯಕ್ಕೆ ತೃಪ್ತರಾಗದ ವಾದಿ ಪ್ರತಿವಾದಿಗಳಲ್ಲೊಬ್ಬನು ಅದಕ್ಕಿಂತಲೂ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಿ ತನ್ನ ಪ್ರಕರಣವನ್ನು ಇನ್ನೊಮ್ಮೆ ಪರಾಮರ್ಶಿಸಿ ನಿರ್ಣಯಿಸುವಂತೆ ಕೋರುತ್ತಾನೆ. ಆಗ ಈ ಪ್ರಕರಣವು ಮತ್ತೊಮ್ಮೆ ಪರಾಮರ್ಶಿಸಲ್ಪಟ್ಟು ನಿರ್ಣಯಿಸಲ್ಪಡುತ್ತದೆ. ಈ ರೀತಿಯಾಗಿ ಮೇಲ್ಮನವಿಯನು ಸಲ್ಲಿಸುತ್ತ ಕೊನೆಯಲ್ಲಿ ರಾಷ್ಟ್ರದ ಸರ್ವೋಚ್ಚ ನ್ಯಾಯಾಲಯದ ಮುಂದೆ ಪ್ರಸ್ತಾಪಿಸಲ್ಪಡುತ್ತದೆ. ಸರ್ವೋಚ್ಚ ನ್ಯಾಯಾಲಯವು ಅಂತಿಮವಾಗಿ ಪರಾಮರ್ಶಿಸಿ ನೀಡಿದ ನಿರ್ಣಯವು ಪ್ರಕರಣದ ಪಕ್ಷಗಾರರನ್ನು ಬಾಧ್ಯಗೊಳಿಸುತ್ತದೆ. ನಂತರದಲ್ಲಿ ಅದೇ ರೀತಿಯಾದ ಪ್ರಕರಣಗಳಿಗೆ ಅದು ಮಾದರೀಯ ನಿರ್ಣಯವಾಗುತ್ತದೆ, ಮತ್ತು ರಾಷ್ಟ್ರದ ಎಲ್ಲ ಕೆಳ ನ್ಯಾಯಾಲಯಗಳು ಅಂಥಹ ಪ್ರಕರಣಗಳನ್ನು ಅದೇ ರೀತಿಯಾಗಿ ನಿರ್ಣಯಿಸಬಹುದಾದ ಬಾಧ್ಯತೆಯನ್ನು ಪೊಂದಿರುತ್ತವೆ. ಈ ರೀತಿಯಾದ ನಿರ್ಣಯವು ಮಾದರೀಯ ನಿರ್ಣಯವಾಗುತ್ತದೆ. ಅದಕ್ಕೆ ಎಲ್ಲ ಕೆಳ ನ್ಯಾಯಾಲಯಗಳು ಮನ್ನಣೆ ನೀಡುವುದು ಅತ್ಯವಶ್ಯವಾಗಿರುತ್ತದೆ. ಇಂಥಹ ಮಾದರೀಯ ನಿರ್ಣಯಗಳ ಬಾಧ್ಯತಾ ಸಾಮರ್ಥ್ಯವನ್ನು ಪರಾಮರ್ಶಿಸುತ್ತ ಭಾರತೀಯ ಕಾನೂನು ಸಮಿತಿಯು ಈ ಕೆಳಗಿನಂತೆ ನಿರ್ದೇಶಿಸಿದೆ.

ಉಚ್ಚ ನ್ಯಾಯಾಲಯದ ನಿರ್ಣಯಗಳು ಕೆಳ ನ್ಯಾಯಾಲಯಗಳನ್ನು ಸಮಗ್ರವಾಗಿ ಬಾಧ್ಯಗೊಳಿಸುತ್ತವೆ. ಕೆಳ ನ್ಯಾಯಾಲಯಗಳು ಉಚ್ಚ ನ್ಯಾಯಾಲಯಗಳ ನಿರ್ಣಯವನ್ನು ಪ್ರಶ್ನಿಸುವಂತಿಲ್ಲ; ಅಲ್ಲದೆ ಅವುಗಳಿಗನುಗುಣವಾಗಿ ನಿರ್ಣಯ ನೀಡುವುದನ್ನು ನಿರಾಕರಿಸುವಂತಿಲ್ಲ. ಅದರ ನಿರಾಕರಣೆಯು ಉಚ್ಚ ನ್ಯಾಯಾಲಯದ ಅವಹೇಳನ ಎಂದೆನ್ನಿಸುತ್ತದೆ.

ಈ ರೀತಿಯಾದ ನಿಯಮವನ್ನು ಜಾರಿಗೊಳಿಸಬೇಕಿದ್ದರೆ, ಉಚ್ಚ ನ್ಯಾಯಾಲಯಗಳ ನಿರ್ಣಯಗಳು ಎಲ್ಲ ಕೆಳನ್ಯಾಯಾಲಯಗಳನ್ನು ಮತ್ತು ರಾಷ್ಟ್ರದ ನಾಗರಿಕರನ್ನು ಬಾಧ್ಯಗೊಳಿಸಬೇಕಿದ್ದರೆ ಅವುಗಳನ್ನು ಎಲ್ಲರ ಗಮನಕ್ಕೆ ತರುವುದು ಅತ್ಯವಶ್ಯ ಅದು ಕೇವಲ ಅಂಥಹ ನಿರ್ಣಯಗಳ ವರದಿಯನ್ನು ಅಧಿಕೃತವಾಗಿ ಪ್ರಕಟಿಸುವುದರಿಂದ ಮಾತ್ರ ಸಾಧ್ಯ.

ಭಾರತದಲ್ಲಿ ಕಾನೂನು ವರದಿಯ ಬೆಳವಣಿಗೆಯನ್ನು ಎರಡು ಭಾಗಗಳಾಗಿ ವಿಂಗಡಿಸಬಹುದಾಗಿದೆ. ಮೊದಲನೇ ಭಾಗವನ್ನು ಭಾರತೀಯ ಉಚ್ಚ ನ್ಯಾಯಾಲಯ ಕಾನೂನು 1862 ರ ವರೆಗೂ ಮತ್ತು ಎರಡನೇ ಭಾಗವನ್ನು ಆ ನಂತರದಿಂದ ಇಲ್ಲಿಯ ಸಮಯದ ವರೆಗೂ ವಿಸ್ತರಿಸಬಹುದಾಗಿದೆ.

## (i) 1862 ರ ವರೆಗೆ ಕಾನೂನು ವರದಿ
## (Law reporting upto 1862)

ಸಾರ್ವಭೌಮ ಪಟ್ಟಣಗಳಲ್ಲಿ ಸರ್ವೋಚ್ಚ ನ್ಯಾಯಾಲಯಗಳನ್ನು ಸ್ಥಾಪಿಸಿ ದಂದಿನಿಂದ ಭಾರತದಲ್ಲಿ ಕಾನೂನು ವರದಿ ಪದ್ಧತಿಯು ಮೊಟ್ಟಮೊದಲಬಾರಿಗೆ ಪ್ರಾರಂಭವಾಯಿತು. ಸಾಮಾನ್ಯವಾಗಿ ವರದಿಯನ್ನು ಮಾಡುವ ಕಾರ್ಯವು ವ್ಯಕ್ತಿಗತ ಸಂಸ್ಥೆಗಳ ಮೂಲಕವಾದ್ದರಿಂದ ಅಷ್ಟೊಂದು ಸುಸಂಘಟಿತವಾದುದಾಗಿರ ಲಿಲ್ಲ. ಆದಾಗ್ಯೂ ಅದು ಕಾನೂನು ವರದಿಯ ಬೆಳವಣಿಗೆಯ ಮೇಲೆ ಅತ್ಯಂತ ಮಹತ್ವದ ಪ್ರಭಾವವನ್ನು ಬೀರಿತ್ತು. ಸರ್ ಫ್ರಾನ್ಸಿಸ್ ಮಾಕ್‌ನಾಟನ್ ಪ್ರಕ ಟಿಸಿದ 1824 ರ ವರದಿ ಮತ್ತು ಸರ್ ವಿಲಿಯಮ್ ಮ್ಯಾಕ್‌ನಾಟನ್ ಪ್ರಕಟಿಸಿದ 1825 ರ ವರದಿ ಅನುಕ್ರಮವಾಗಿ ಹಿಂದೂ ಮತ್ತು ಮುಸ್ಲೀಮ್ ಕಾನೂನಿನ ವ್ಯಕ್ತಿಗತ ಕಾನೂನಿನ ಸ್ಥಿತಿಗತಿ ಮತ್ತು ಬಾಧ್ಯತಾ ಸಾಮರ್ಥ್ಯದ ಮೇಲೆ ಅತ್ಯಂತ ಬೆಳಕನ್ನು ಚೆಲ್ಲಿದವು. ಇದಾದ ನಂತರ ಹಲವಾರು ಶಾಸ್ತ್ರಜ್ಞರು, ಕಾನೂನು ತಜ್ಞರು, ನ್ಯಾಯಾಧೀಶರು ಉಚ್ಚ ಹಾಗೂ ಸರ್ವೋಚ್ಚ ನ್ಯಾಯಾಲಯಗಳ ನಿರ್ಣ ಯಗಳನ್ನು ಕ್ರೋಢೀಕರಿಸಿ ವರದಿ ಮಾಡಿದರು. ಇವೆಲ್ಲ ಕಾನೂನು ವರದಿಗಳು ಹಂತ ಹಂತವಾಗಿ ಕಾನೂನು ವರದಿಯ ಬೆಳವಣಿಗೆಯನ್ನು ಪುಷ್ಟೀಕರಿಸಿದವು.

## (ii) 1862 ರ ನಂತರದ ಕಾನೂನು ವರದಿ
## (Law reporting after 1862)

1862 ರಲ್ಲಿ ಉಚ್ಚ ನ್ಯಾಯಾಲಯಗಳ ಸ್ಥಾಪನೆಯೊಂದಿಗೆ ಭಾರತದಲ್ಲಿ ಕಾನೂನು ವರದಿಯು ಅತ್ಯಂತ ತೀವ್ರಗತಿಯಲ್ಲಿ ಮುನ್ನಡೆಯಿತು. ಅನೇಕ ಸ್ವತಂತ್ರ ವ್ಯಕ್ತಿಗಳು ನಿಯಮಿತವಾಗಿ ಸರಕಾರದ ಪರವಾಗಿ ವರದಿಯನ್ನು ಪ್ರಾರಂಭಿ ಸಿದರು. 1862 ರಿಂದ 1875 ರ ವರೆಗಿನ ಎಲ್ಲ ನಿರ್ಣಯಗಳನ್ನು ಎರಡು ಆವೃತ್ತಿಗಳಲ್ಲಿ ಮದ್ರಾಸ ಉಚ್ಚ ನ್ಯಾಯಾಲಯದ ವರದಿ ಎಂಬ ಪ್ರಕಟನೆಯು ಹೊರಬಂತು. ಇದೇ ಕಾಲಾವಧಿಯ ಮುಂಬಯಿ ಉಚ್ಚ ನ್ಯಾಯಾಲಯದ ವರದಿಯು 12 ಆವೃತ್ತಿಗಳಲ್ಲಿ ಪ್ರಕಟಗೊಂಡಿತು.

ಭಾರತ ಸರಕಾರದ ಕಾನೂನು ವರದಿ ಸಮಿತಿಯ ಸದಸ್ಯರಾದ ಸರ್ ಜೇಮ್ಸ ಸ್ಟೀಫನ್‌ನು ಭಾರತದಲ್ಲಿಯ ಕಾನೂನು ವರದಿಯು ಅಷ್ಟೊಂದು ತೃಪ್ತಿಕರವಾಗಿಲ್ಲ ವೆಂಬುದಾಗಿ ಹೇಳಿದನು. ಸ್ವತಂತ್ರ ವ್ಯಕ್ತಿಯಿಂದ ಕಾನೂನು ವರದಿಯು ಕೇವಲ ವ್ಯಾಪಾರೀ ಸ್ವರೂಪದಾಗಿದೆ ಎಂಬ ಮಾತನ್ನು ಒತ್ತಿ ಹೇಳಿದನು. ಅವರು ವರದಿ ಮಾಡಿದ ಪ್ರಕರಣಗಳಲ್ಲಿ ವರದಿಮಾಡಲು ಯೋಗ್ಯವಾದ ಅಥವಾ ಅಯೋಗ್ಯವಾದ ಭಿನ್ನತೆಗೆ ಗಮನಕೊಡದೆ ಕೇವಲ ತಮ್ಮ ಆದಾಯವನ್ನು ಗಮನದಲ್ಲಿಟ್ಟುಕೊಂಡು ಪ್ರಕಟಿಸಿದಾಗಿತ್ತು. ಇದರಿಂದಾಗಿ ನ್ಯಾಯದಾನದ ಆಡಳಿತಾತ್ಮಕ ಕಾರ್ಯದಲ್ಲಿ ಗೊಂದಲಮಯ ವಾತಾವರಣ ಉಂಟಾಗಬಹುದಾದ ಪರಿಸ್ಥಿತಿಯು ತಲೆದೋರಿತು. ಸರಕಾರವು ಕಾನೂನು ವರದಿ ಕುರಿತು ನಿಯಮಗಳನ್ನು ನಿರೂಪಿಸಬೇಕೆಂಬ ಸಲಹೆಯು ಕೇಳಿ ಬಂತು. ಅಂತೆಯೇ, 1875 ರಲ್ಲಿ ಭಾರತೀಯ ಕಾನೂನು ವರದಿ ಕಾಯ್ದೆ

ಯನ್ನು ಪಾಸು ಮಾಡಲಾಯಿತು. ಈ ಕಾನೂನು ಉಚ್ಚ ನ್ಯಾಯಾಲಯದ ನಿರ್ಣಯ ಪ್ರಕರಣಗಳ ವರದಿಯ ಅಧಿಕಾರವನ್ನು ನೀಡಿತು. ಇದಾದನಂತರ ಅನೇಕ ಉಚ್ಚ ನ್ಯಾಯಾಲಯಗಳಲ್ಲಿ ಸಮಿತಿಗಳನ್ನು ರಚಿಸಲಾಯಿತು. ಅವುಗಳ ಮೇಲ್ವಿಚಾರಣೆಯಲ್ಲಿ ನಿರ್ಣಯಗಳ ವರದಿಯು ಪ್ರಾರಂಭವಾಯಿತು.

ಇದು ಸ್ವತಂತ್ರ ಕಾನೂನು ವರದಿಯ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿತು. ಅದಕ್ಕಾಗಿ ದೇಶದ ಅನೇಕ ಭಾಗಗಳಿಂದ ಈ ಕಾನೂನನ್ನು ಕಟುವಾಗಿ ಟೀಕಿಸಲಾಯಿತು. ಆದರೆ, ಈ ಕಾನೂನು ಸ್ವತಂತ್ರ ವ್ಯಕ್ತಿಗಳಿಂದ ಕಾನೂನು ವರದಿಯನ್ನು ನಿರ್ಬಂಧಿಸಿಲ್ಲವಾದ್ದರಿಂದ ಸ್ವತಂತ್ರ ಸಂಸ್ಥೆಗಳಿಂದಲೂ ಕಾನೂನು ವರದಿ ಪದ್ಧತಿಯು ಅಸ್ತಿತ್ವದಲ್ಲಿ ಉಳಿಯಿತು.

i) ಭಾರತೀಯ ಕಾನೂನು ವರದಿ, ಅಲಹಾಬಾದ.

ii) ಭಾರತೀಯ ಕಾನೂನು ವರದಿ, ಮುಂಬಯಿ.

iii) ಭಾರತೀಯ ಕಾನೂನು ವರದಿ, ಮೈಸೂರು.

iv) ಭಾರತೀಯ ಕಾನೂನು ವರದಿ, ಪಂಜಾಬ.

v) ಭಾರತೀಯ ಕಾನೂನು ವರದಿ, ಕಲಕತ್ತಾ.

ಇತ್ಯಾದಿಗಳು ಸರಕಾರ ಸ್ವಾಮ್ಯದ ಕಾನೂನು ವರದಿ ಸಂಚಿಕೆಗಳಾಗಿದ್ದರೆ,

i) ಅಲಹಾಬಾದ ಕಾನೂನು ವರದಿ

ii) ಅಲಹಾಬಾದ ಮಾಸಿಕ ವರದಿ

iii) ಅಲಹಾಬಾದ ಮಾಸಿಕ ಪ್ರಕರಣಗಳು

iv) ಆಂಧ್ರಪ್ರದೇಶ ಮಾಸಿಕ ವರದಿ

v) ಕರ್ನಾಟಕ ಕಾನೂನು ವರದಿ

ಇತ್ಯಾದಿಗಳು ಸರಕಾರೀ ಸೌಮ್ಯವಲ್ಲದ ಕಾನೂನು ವರದಿ ಗ್ರಂಥಗಳಾಗಿದ್ದವು.

## 19. ಭಾರತದಲ್ಲಿ ಸದ್ಯದ ನ್ಯಾಯದಾನ ಪದ್ಧತಿ (Present Judicial System in India)

ಭಾರತದಲ್ಲಿಯ ಸದ್ಯದ ನ್ಯಾಯದಾನ ಪದ್ಧತಿಯು ಕೇಂದ್ರೀಯ ಕೇಂದ್ರೀಕೃತ ಸ್ವರೂಪದ್ದಾಗಿದ್ದು ಕೆಲಮಟ್ಟಿಗೆ, ಏಕಪಕ್ಷೀಯ ಸ್ವರೂಪದ ಲಕ್ಷಣಗಳಿಂದ ಕೂಡಿರುತ್ತದೆ. ಈ ನ್ಯಾಯದಾನ ಪದ್ಧತಿಯ ಅತ್ಯುಚ್ಚ ನ್ಯಾಯಾಲಯವಾಗಿ ಸರ್ವೋಚ್ಚ ನ್ಯಾಯಾಲಯವು ಕಾರ್ಯ ನಿರ್ವಹಿಸುತ್ತಿದ್ದರೆ, ಅದರ ಕೆಳ ಪ್ರಾಧಿಕಾರದಲ್ಲಿ ಉಚ್ಚ ನ್ಯಾಯಾಲಯಗಳು ಕಾರ್ಯ ನಿರ್ವಹಿಸುತ್ತವೆ. ಸಾಮಾನ್ಯವಾಗಿ ಪ್ರತಿಯೊಂದು ರಾಜ್ಯಕ್ಕೆ ಒಂದು ಉಚ್ಚ ನ್ಯಾಯಾಲಯವಿದ್ದು ಆಯಾ ರಾಜ್ಯದ ಸರ್ವೋಚ್ಚ ನ್ಯಾಯಾಲಯವಾಗಿರುತ್ತದೆ. ಈ ನ್ಯಾಯಾಲಯದ ಕೆಳ ಪ್ರಾಧಿಕಾರ

ದಲ್ಲಿ ಜಿಲ್ಲಾ ನ್ಯಾಯಾಲಯಗಳು, ಟ್ರಿಬ್ಯೂನಲ್‌ಗಳು ಮತ್ತು ಇನ್ನಿತರ ಕೆಳನ್ಯಾಯಾಲಯಗಳು ಕಾರ್ಯ ನಿರ್ವಹಿಸುತ್ತವೆ. ನ್ಯಾಯದಾನ ಪದ್ಧತಿಯನ್ನು ಪ್ರಾಮುಖ್ಯವಾಗಿ ಎರಡು ವಿಧದಲ್ಲಿ ವಿಂಗಡಿಸಬಹುದಾಗಿದೆ.

## 1. ದೀವಾಣೀ ನ್ಯಾಯದಾನ ಪದ್ಧತಿ (Civil Judiciary System)

ಈ ನ್ಯಾಯದಾನ ಪದ್ಧತಿಯು ಕೆಳನ್ಯಾಯಾಲಯವಾಗಿ, ಮುನ್ಸಿಫ್ ಅಥವಾ ಕಿರಿಯ ದೀವಾಣೀ ನ್ಯಾಯಾಧೀಶನು ಕಾರ್ಯ ನಿರ್ವಹಿಸುತ್ತಾನೆ. ಈ ನ್ಯಾಯಾಲಯಕ್ಕೆ ಕೇವಲ ಮೂಲ ಪ್ರಾಧಿಕಾರವಿದೆ. ಈ ನ್ಯಾಯಾಲಯದ ನಿರ್ಣಯದ ಮೇಲೆ ಜಿಲ್ಲಾ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿದೆ. ಮುನ್ಸಿಫ್‌ರಿಗೆ ಹಣಕಾಸಿನ ಸೀಮಿತ ಪ್ರಾಧಿಕಾರವಿರುತ್ತದೆ. ಅವರ ನಿರ್ಣಯಕ್ಕೆ ಮಂಡಿಸಲಾದ ವ್ಯಾಜ್ಯದಲ್ಲಿ ಅವರ ಪ್ರಾಧಿಕಾರವನ್ನು ಮೀರಿದ ಮೊತ್ತವಾಗಿದ್ದರೆ ಅವರು ನಿರ್ಣಯಕ್ಕಾಗಿ ಅಂಗೀಕರಿಸಲಿಕ್ಕಾಗದು. ಅಂಥಹ ವ್ಯಾಜ್ಯಕುರಿತು ಜಿಲ್ಲಾ ನ್ಯಾಯಾಲಯಕ್ಕೆ ಮೂಲ ಪ್ರಾಧಿಕಾರವಿರುತ್ತದೆ. ಅಂತೆಯೇ, ಜಿಲ್ಲಾ ನ್ಯಾಯಾಲಯವು ಮೂಲ ಮತ್ತು ಮೇಲ್ಮನವಿ ಪ್ರಾಧಿಕಾರವನ್ನು ಹೊಂದಿರುತ್ತದೆ. ಜಿಲ್ಲಾ ನ್ಯಾಯಾಲಯದ ನಿರ್ಣಯದ ಮೇಲೆ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಲು ಅವಕಾಶವಿದೆ. ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಪ್ರಾಧಿಕಾರ ಮತ್ತು ಇನ್ನುಳಿದ ಕೆಳ ನ್ಯಾಯಾಲಯದ ಮೇಲೆ ಮೇಲ್ವಿಚಾರಣಾ ಪ್ರಾಧಿಕಾರವನ್ನೂ ಹೊಂದಿರುತ್ತದೆ. ಮುಂಬಯಿ, ಮದ್ರಾಸ ಮತ್ತು ಕಲಕತ್ತಾ ಉಚ್ಚ ನ್ಯಾಯಾಲಯಗಳನ್ನು ಹೊರತುಪಡಿಸಿ ಇನ್ನುಳಿದ ಯಾವ ನ್ಯಾಯಾಲಯವೂ ರಿಟ್ ಒಂದನ್ನು ಬಿಟ್ಟು ಮೂಲ ಪ್ರಾಧಿಕಾರವನ್ನು ಹೊಂದಿಲ್ಲ.

## (ii) ಕ್ರಿಮಿನಲ್ ನ್ಯಾಯದಾನ ಪದ್ಧತಿ (Criminal Judicial System)

ಕ್ರಿಮಿನಲ್ ನ್ಯಾಯದಾನಕ್ಕಾಗಿ ಕ್ರಿಮಿನಲ್ ನ್ಯಾಯಾಲಯಗಳನ್ನು ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಗನುಗುಣವಾಗಿ ಸ್ಥಾಪಿಸಲಾಗಿದೆ. ಅತ್ಯಂತ ಕೆಳನ್ಯಾಯಾಲಯವಾಗಿ ಮ್ಯಾಜಿಸ್ಟ್ರೇಟ (ಮೊದಲನೇಯ, ಎರಡನೇಯ ಮತ್ತು ಮೂರನೇಯ) ನ್ಯಾಯಾಲಯವು ಕಾರ್ಯನಿರ್ವಹಿಸುತ್ತಿದ್ದು ಅವರಿಗೆ ಕೆಲವೊಂದು ಸೀಮಿತ ಪ್ರಕರಣಗಳನ್ನು ಮಾತ್ರ ವಿಚಾರಿಸುವ ಅಧಿಕಾರವಿದೆ. ಅತ್ಯಂತ ಹೀನಾಯ ಪ್ರಕರಣಗಳಾದ ಕೊಲೆ, ಸುಲಿಗೆ ಇತ್ಯಾದಿಗಳ ವಿಚಾರಣೆಗಾಗಿ ಅವರ ಮುಂದೆ ಬಂದಲ್ಲಿ ಅವರು ಪ್ರಾಥಮಿಕ ವಿಚಾರಣೆಯನ್ನು ಮಾತ್ರ ಮಾಡಿ ಅದನ್ನು ಸೆಶೆನ್ಸ್ ನ್ಯಾಯಾಲಯಕ್ಕೆ ಕಳಿಸಿಕೊಡುತ್ತಾರೆ. ಸೆಶನ್ಸ್ ನ್ಯಾಯಾಲಯದ ನಿರ್ಣಯದ ಮೇಲೆ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದಾಗಿದೆ.

ಉಚ್ಚ ನ್ಯಾಯಾಲಯಗಳ ನಿರ್ಣಯದ ಮೇಲೆ, ದೀವಾಣೀ ಮತ್ತು ಕ್ರಿಮಿನಲ್ ಪ್ರಕರಣಗಳ ಮೇಲ್ಮನವಿಯು ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸ

ಲ್ಪಡುವುದು. ಸರ್ವೋಚ್ಚ ನ್ಯಾಯಾಲಯವು ದೀವಾಣೀ ಪ್ರಕರಣದ ಮೇಲ್ಮನವಿ ವಿಚಾರಣೆಯಲ್ಲಿ ದೀವಾಣೀ ನ್ಯಾಯಾಲಯದಂತೆಯೂ, ಕ್ರಿಮಿನಲ್ ಪ್ರಕರಣದ ಮೇಲ್ಮನವಿಯ ವಿಚಾರಣೆಯಲ್ಲಿ ಕ್ರಿಮಿನಲ್ ನ್ಯಾಯಾಲಯದಂತೆಯೂ ಕಾರ್ಯ ನಿರ್ವಹಿಸುವುದು.



# ನಮ್ಮ ಪ್ರಕಟನೆಗಳು

1. Leading Cases 1st LL.B.
2. Leading Problems ,,
3. Leading Cases 2nd LL.B.
4. Leading Problems ,,
5. Public International Law
6. Principles of Administrative Law
7. Hindu Law
8. Specific Relief Act
9. Kenney's Outlines of Criminal Law

1. ಕರ್ನಾಟಕ ಜಿಲ್ಲಾ ಪರಿಷತ್ತು
2. ಜಿಲ್ಲಾ ಪರಿಷತ್ತಿನ ನಿಯಮಗಳು
3. ಅಪರಾಧಿಕ ಕಾನೂನುಗಳ ಸಿದ್ಧಾಂತ
4. ಪೋಲೀಸ್ ಕಾಯಿದೆ (Police Act)
5. ನ್ಯಾಯಶಾಸ್ತ್ರ (Jurisprudence)
6. ಹಿಂದೂ ಕಾನೂನು (Hindu Law)
7. ಕಂಪನಿ ಕಾನೂನು (Company Law)
8. ಸಾಂವಿಧಾನಿಕ ವಿಧಿ ಪ್ರಮುಖ ತೀರ್ಪುಗಳು
9. ಅಪಕೃತ್ಯಗಳ ಕಾನೂನು (Law of Torts)
10. ಸಹಕಾರಿ ಸಂಘಗಳ ಕಾಯದೆ ಮತ್ತು ನಿಯಮಗಳು
11. ಆಡಳಿತ ಕಾನೂನು (Administrative Law)
12. ಸರಕು ವಿಕ್ರಯ ಅಧಿನಿಯಮ (Sale of Goods)
13. ಭಾರತದ ದಂಡ ಸಂಹಿತೆ (Indian Penal Code)
14. ಭಾರತದ ಪುರಾವೆ ನೀತಿ (Indian Evidence Act)
15. ಅಂತರರಾಷ್ಟ್ರೀಯ ಕಾನೂನು (International Law)
16. ಹಿಂದೂ ವಿವಾಹ ಕಾಯದೆ (Hindu Marriage Act)
17. ಮಹಮ್ಮದೀಯ ಕಾನೂನು (Mohammedan Law)
18. ಭಾರತೀಯ ಕಾನೂನು ಇತಿಹಾಸ (Indian Legal History)
19. ಭಾರತದ ಸಂವಿಧಾನ (Indian Constitutional Law)
20. ಭಾರತೀಯ ಕರಾರು ಅಧಿನಿಯಮ (The Indian Contract Act)
21. ಸ್ವತ್ತು ಹಸ್ತಾಂತರ ಅಧಿನಿಯಮ (Transfer of Property Act)
22. ಭಾರತೀಯ ಭಾಗೀದಾರಿಕೆ ಅಧಿನಿಯಮ (Indian Partnership Act)
23. ಪರಕ್ರಾಮ್ಯ ಪತ್ರಗಳ ಅಧಿನಿಯಮ (Negotiable Instruments Act)

— ಪ್ರತಿಗಳು ಎಲ್ಲಾ ಪ್ರಮುಖ ಪುಸ್ತಕ ವ್ಯಾಪಾರಿಗಳಲ್ಲಿ ದೊರೆಯುತ್ತವೆ —

Ind.Leg.Hist. I 880806 Rs. 12-00